# ಮೌನಗೀತ

ಟಿ. ಎಂ. ಷಡಕ್ಷರಿ



MOUNA GEETHE : Collection of Poems in Kannada by T. M. Shadakshari. Sekhar Nursing Home Bangalore-19 Published by Lions Club of Tiptur. Crown octave XVI + 68 Pages.



ಮೊದಲನೆಯ ಮುದ್ರಣ : 1985

ಪ್ರತಿಗಳು : 1000

ಎರಡನೆಯ ಮುದ್ರಣ : 1986
ಪ್ರತಿಗಳು : 2000



ಬೆಲೆ : ಹತ್ತು ರೂಪಾಯಿಗಳು



ಪ್ರಕಾಶಕರು :

ಲಯನ್ಸ್ ಕ್ಲಬ್, ತಿಪಟೂರು.

ಮುದ್ರಣ :

ಅಕ್ಷಯ ಮುದ್ರಣ
81/01, ಗಾಂಧಿಬಜಾರ್, ಬೆಂಗಳೂರು

# ಪ್ರಕಾಶಕರ ಒಂದು ಮಾತು

ದುರ್ದೈವೀ ಷಡಕ್ಷರಿಯ ಹೃದಯ ವಿದ್ರಾವಕ ಕಥೆಯನ್ನು ಸಹೃದಯ ಓದುಗರು ಅವನ ಮಾತುಗಳಿಂದಲೇ ಅರಿಯುವುದು ಹೆಚ್ಚು ಸೂಕ್ತವೆನಿಸುತ್ತದೆ. ಸ್ಥಳೀಯ ಸರ್ಕಾರಿ ವೈದ್ಯಕೀಯ ಸಿಬ್ಬಂದಿಯವರ ಕಾರುಣ್ಯ ಪೂರ್ಣವಾದ ಧೀರ್ಘಾವಧಿ ಶುಶ್ರೂಷೆಯ ಏಕೈಕ ಆಸರೆಯಿಂದ ಷಡಕ್ಷರಿ ಇನ್ನೂ ಬದುಕಿ ಉಳಿದಿದ್ದಾನೆ. ಜೀವನದ ಸಮಸ್ತ ಸುಖ, ಸಂತೋಷ, ಸವಲತ್ತುಗಳಿಂದ ವಂಚಿತನಾದ ಷಡಕ್ಷರಿ ತನ್ನ ನಿರಂತರ ಸಾವು ನೋವುಗಳ ಹೊಯ್ದಾಟದಲ್ಲೂ ಬದುಕುವ ತನ್ನ ಅದಮ್ಯ ಆಸೆಗೆ ಕಾವ್ಯ ರಚನೆಯ ಮರೆ ಹೊಕ್ಕಿದ್ದಾನೆ. ಪರಿಮಿತ ವಿದ್ಯಾಭ್ಯಾಸದ ಅನಿವಾರ್ಯತೆ, ಹಾಗೂ ಜಗತ್ತಿನ ಸಂಪರ್ಕಕ್ಕೆ ದೈಹಿಕ ಬಾಧೆ ಇವುಗಳ ನಡುವೆಯೂ, ಹೃದಯದ ಸಂವೇದನೆಗಳನ್ನು ತನ್ನ ಕಾವ್ಯಗಳಲ್ಲಿ ಮನೋಜ್ಞವಾಗಿ ವ್ಯಕ್ತಪಡಿಸುವ ಅಪರೂಪವಾದ ಶಕ್ತಿ ಅವನಿಗೆ ಹೇಗೆ ಉಂಟಾಯಿತು ಎಂಬುದೇ ಒಂದು ವಿಸ್ಮಯ.

ನತದೃಷ್ಟ ಷಡಕ್ಷರಿಯಂತವರಿಗೆ ಕೇವಲ ಅನುಕಂಪ ಸಹಾನುಭೂತಿಗಳಿಗಿಂತ ಹೆಚ್ಚಾಗಿ ಹೆಚ್ಚಿನ ಚಿಕಿತ್ಸೆ ಅಗತ್ಯವೆಂಬುದನ್ನು ಮನಗಂಡು, ಮಾನವ ಕಲ್ಯಾಣವನ್ನೇ ಧ್ಯೇಯವಾಗುಳ್ಳ ಲಯನ್ಸ್ ಕ್ಲಬ್ಬಿನ ತಿಪಟೂರು ಶಾಖೆ ಅವನ ಕವನ ಸಂಗ್ರಹ ಪ್ರಕಾಶನದ ಜವಾಬ್ದಾರಿಯನ್ನು ಹೊತ್ತು ಆತನಿಗೆ ಆರ್ಥಿಕವಾಗಿ ನೆರವು ನೀಡಲು ಮುಂದೆ ಬಂದಿದೆ. ಈ ಕೃತಿಯನ್ನು ಪ್ರಕಟಿಸುವ ಉದ್ದೇಶವನ್ನು ನಮ್ಮಲ್ಲಿ ಮೂಡಿಸಿದ ಮಿತ್ರರಾದ ಶ್ರೀ ಬಿ. ವಿ. ಎಸ್. ಗುಪ್ತ ಮತ್ತು ಶ್ರೀ ಹೆಚ್. ಆರ್. ರಘುನಾಥ್‌ರವರಿಗೂ,

ಪ್ರಕಟಣೆಯ ಎಲ್ಲಾ ಹಂತಗಳಲ್ಲೂ ಶ್ರಮಿಸಿರುವ ನಮ್ಮೂರಿನ ಕಲ್ಪತರು ವಿದ್ಯಾಸಂಸ್ಥೆಯ ಉಪನ್ಯಾಸಕರಾದ ಶ್ರೀ ತಮ್ಮಾಜಿರಾವ್ ಮತ್ತು ಶ್ರೀ ಟಿ. ಕೆ. ಶಿವಣ್ಣನವರಿಗೂ, ಕೃತಿಗೆ ಹಾರೈಕೆಯನ್ನು ಬರೆದುಕೊಟ್ಟು ನಮ್ಮ ಬೆನ್ನುತಟ್ಟಿರುವ ಹಿರಿಯರಾದ ಶ್ರೀ ಹೀ. ಚಿ. ಶಾಂತವೀರಯ್ಯನವರಿಗೂ ರಕ್ಷಾಪುಟವನ್ನು ಅಂದವಾಗಿ ಬರೆದುಕೊಟ್ಟಿರುವ ಬೆಂಗಳೂರಿನ ಕಲಾವಿದ ಶ್ರೀ ಕಮಲೇಶ್‌ರವರಿಗೂ ತುಂಬು ಹೃದಯದ ವಂದನೆಗಳನ್ನು ಅರ್ಪಿಸುತ್ತೇವೆ.

ನಮ್ಮ ಈ ಕಿಂಚಿತ್ ಸೇವೆಯು ಪ್ರತೀಕವಾಗಿ ಷಡಕ್ಷರಿ ಸಾವಿನ ದವಡೆಯಿಂದ ಬಿಡುಗಡೆ ಹೊಂದಿ, ಮನುಷ್ಯನಾಗಿ ನಮ್ಮ ನಡುವೆ ಸಂತೋಷದಿಂದ ಬಾಳುವಂತಾದರೆ ನಾವು ಕೃತಕೃತ್ಯರೆಂದು ಭಾವಿಸುತ್ತೇವೆ.

ಎ. ಭವರ್‌ಲಾಲ್,
ಅಧ್ಯಕ್ಷರು ಮತ್ತು ಸದಸ್ಯರು
ಲಯನ್ಸ್ ಕ್ಲಬ್, ತಿಪಟೂರು

ಸೆಪ್ಟೆಂಬರ್, 1985

# ಹರಕೆ

"ಪ್ರತಿಭಾನಂ ಕಾವ್ಯವಿದ್ಯಾಪ್ರಚಯು ಪರಿಚಯಂ ವೃದ್ಧಸೇವಾನು
ರಾಗಂ ಸತತಾಭ್ಯಾಸ ಪ್ರಯತ್ನಂ ಕವಿತೆಗೆ ನಿಯತಂ ಕಾರಣಂ"

—ಎಂಬ ಆರ್ಯೋಕ್ತಿಯಂತೆ ಪ್ರತಿಭೆಯೊಂದನ್ನು ಬಿಟ್ಟು ಉಳಿದ ಯಾವ ಸೌಕರ್ಯ, ಸೌಲಭ್ಯಗಳೂ ಇಲ್ಲದಿರುವ, ಗ್ರಾಮೀಣ ಪ್ರದೇಶದ, ಅಂಗೆ ಹೀನ, ಪೋಷಕರಿಲ್ಲದ, ಅನಾಥನಾದ ಬಾಲಕನೊಬ್ಬ ಕವಿತ್ವವನ್ನು ರಚಿಸಿ ಜನಮನವನ್ನು ಸೂರೆಗೊಂಡಿರುವುದು ಇತಿಹಾಸದಲ್ಲಿಯೇ ಪ್ರಥಮ.

ಉದಯೋನ್ಮುಖ ಕವಿಯಾಗಿರುವ ಶ್ರೀ ಟಿ. ಎಂ. ಷಡಕ್ಷರಿ ಅವರು ನಿಜಕ್ಕೂ ಸಹಜಕವಿ. ಕಂಡದ್ದನ್ನು, ತನ್ನ ಮನಕ್ಕೆ ತೋಚಿದ್ದನ್ನು ಗೀಚಿ ಕವಿತ್ವಕ್ಕೆ ಇಳಿಸಿದ್ದಾರೆ. ಒಂದು ರೀತಿಯಲ್ಲಿ ಇವರ ಕವಿತೆಗಳು ಆಗತಾನೆ ಗಣಿಯಲ್ಲಿ ದೊರಕಿದ ಒರಟು ರತ್ನದ ಕಲ್ಲಿನಂತಿವೆ. ಅವುಗಳಿಗೆ ಸಾಣೆ ಹಿಡಿದು ಹೊಳಪು ಕೊಡಬೇಕು. ಅವರ ಮೊದಲನೆಯ ಕವನ ಸಂಕಲನ 'ಮೌನಗೀತೆ' ಅನ್ವರ್ಥವಾಗಿದೆ. ಅದರಲ್ಲಿನ ಪಂಜರದ ಪಕ್ಷಿ, ನೆನಪು, ನನ್ನ ಪಥ, ವಿರಾಮ, ಮನಸ್ಸು, ರಸ ನಿಮಿಷ, ಏನಿದರರ್ಥ ಮತ್ತು ದುಃಖ ಕವನಗಳು, ಅವರ ಪ್ರತಿಭೆಗೆ ಸಾಕ್ಷಿಯಾಗಿವೆ. "ವಿಧಿಯೇ........ ನಿನ್ನೆದುರು ಛಲತೊಟ್ಟು ನಾನು ಬದುಕಲೆತ್ನಿಸುತ್ತೇನೆ." ನಿಜ ಜೀವನ ದಲ್ಲಿಯೂ ಕವಿಬಾಳು ಹೀಗಾಗಿದೆ, ವಿಧಿಗೆ ವಿರುದ್ಧವಾಗಿ ಬಾಳುತ್ತಿದ್ದಾರೆ. ಅವರ ಈ ದುಃಖದ ಬಾಳನ್ನು ನೋಡಿ ಜನತೆ ಅದರಲ್ಲೂ ಲಯನ್ಸ್ ಕ್ಲಬ್ ಉದಾರವಾಗಿ ಕವಿಯನ್ನು ರಕ್ಷಿಸಿ ಕಾವ್ಯವನ್ನು ಬರೆಸುತ್ತಿರುವುದು, ಬರೆಯಲು ಪ್ರೋತ್ಸಾಹವೀಯುತ್ತಿರುವುದು ಆದರ್ಶಪ್ರಾಯವೂ ಅನುಕರಣನೀಯವೂ ಆಗಿದೆ. ಎದೆಯುಣಿಸಿ ಮುತ್ತಿಟ್ಟು ಸಾಕುತ್ತಿದ್ದಾರೆ. ಅವರಿಗೆ ನಮನಗಳು.

ಕವಿಗೆ ತಾನು ಬರೆದ ಗ್ರಂಥ ಪ್ರಕಟವಾಗಿ ಜನತೆ ಅದನ್ನು ಗೌರವಿ ದ್ದಾರೆ ಎಂದು ತಿಳಿದಾಗ ಅವನಿಗೆ ಆಗುವಷ್ಟು ಸಂತೋಷ ವರ್ಣಿಸಲ ಅಸಾಧ್ಯವಾದುದು.

ತಾಯಿ ಭುವನೇಶ್ವರಿ ಈ ತರುಣ ಕವಿಗೆ ಆರೋಗ್ಯ, ಆಯುಷ್ಯ ಐಶ್ವರ್ಯಗಳನ್ನು ಕೊಟ್ಟು ಇನ್ನೂ ಹೆಚ್ಚಿನ ಸೇವೆ ಮಾಡಿ ಕನ್ನ ಸರಸ್ವತಿಯ ಸಿರಿಮುಡಿಗೆ ಶಾಶ್ವತವಾದ ಸುಮಗಳನ್ನು ತೊಡಿಸಲು ಕರುಣಿ ಬೇಕಾಗಿ ಪ್ರಾರ್ಥಿಸುತ್ತಾ, ಕನ್ನಡಿಗರು ಬಿಚ್ಚು ಮನದಿಂದ ಈ ಕವಿ ಗಳನ್ನು ಕೊಂಡು ಓದಿ ದೇವಮಾನವರಾಗಬೇಕೆಂದು ಬಿನ್ನವಿಸುತ್ತೇನೆ.

ಸಂಪಾದಕರು
**ಕನ್ನಡ ನಿಘಂಟು**
ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ, ಬೆಂಗಳೂರು-18

ಇಂತು ತಮ್ಮ ವ
ಹೀ. ಚಿ. ಶಾಂತವೀರಯ
18-7-198

# ಬದುಕು ಬಂದ ದಾರಿ

---

ನನ್ನ ಬದುಕು ಅನೇಕ ಆಕಸ್ಮಿಕ ಘಟನೆಗಳ ಸರಮಾಲೆ. "ಮೌನ ಗೀತೆ" ನನ್ನ ಪ್ರಥಮ ಪ್ರಕಟನೆ. ಆದ್ದರಿಂದ ಕೆಲವು ಮಾತುಗಳನ್ನು ಬರೆಯುವುದು ಉಚಿತ. ವಿಧಿ ವಿಚಿತ್ರವೆಂಬಂತೆ ನನ್ನ ಬದುಕಿನ ಮೂಲ ಚಿತ್ರವೇ ಬದಲಾಯಿತು. ಅರಿವು ಮೂಡುವ ಮುನ್ನವೆ ತಾಯಿಯನ್ನು ಕಳೆದುಕೊಂಡು ತಬ್ಬಲಿಯಾದೆ. ಮಾತೃಹೃದಯದ ಹಿತದಿಂದ ವಂಚಿತನಾಗಿ ಮಲತಾಯಿಯ ಆಶ್ರಯಕ್ಕೆ ಬರಬೇಕಾಯಿತು. ನನ್ನ ದುರದೃಷ್ಟಕ್ಕೆ ಅವರ ಪ್ರೀತಿ ಕೇವಲ ಕೃತಕವಾಗಿ ಪರಿವರ್ತನೆಗೊಂಡಿತು. ಬದುಕಿಗೆ ಆಸರೆಯಂತಿದ್ದ ತಂದೆಯವರು ಅಕಾಲ ಮೃತ್ಯುವಿಗೆ ಗುರಿಯಾದರು. ಪ್ರೌಢಾವಸ್ಥೆಗೆ ಕಾಲಿಡುವಷ್ಟರಲ್ಲಿ, ಆಗೊಮ್ಮೆ ಈಗೊಮ್ಮೆ ಇಣುಕುತ್ತಿದ್ದ ಖಾಯಿಲೆ ನನ್ನ ಮೇಲೆ ಪೂರ್ಣ ಅಸ್ತಿತ್ವವನ್ನು ಸ್ಥಾಪಿಸಿತು. ನರಗಳ ದೌರ್ಬಲ್ಯದಿಂದ ಕಾಲುಗಳೆರಡೂ ಶಕ್ತಿಹೀನವಾಗಿ ಕುಸಿದವು. ಆಗ ಯಾವ ಹಸ್ತವೂ ನನ್ನನ್ನು ಮೇಲೆತ್ತಲು ಪ್ರಯತ್ನಿಸಲಿಲ್ಲ. ಬದುಕು ಅಂಧಕಾರವಾಯಿತು. ಆಗ ಅನುಭವಿಸಿದ ಕಹಿಯ ತೂಕಕ್ಕೆ ಲೆಕ್ಕ ಬರೆಯುವುದು ಸಾಧ್ಯವಿಲ್ಲ.

ಮೂರು ವರ್ಷಗಳ ಕಾಲ ಯಾವುದೇ ಚಿಕಿತ್ಸೆಯಿಲ್ಲದೆ ಮೂಲೆಯಲ್ಲೇ ನರಳುವ ಸ್ಥಿತಿಯಾಯಿತು. ಅಗ ಮಿತ್ರರೊಬ್ಬರ ನೆರವಿನಿಂದ ತಿಪಟೂರಿನ ಜನರಲ್ ಆಸ್ಪತ್ರೆಗೆ ಬಂದು ಸೇರಿಕೊಂಡೆ. ಆರ್ಥಿಕ ಪರಿಸ್ಥಿತಿಯ ಕಾರಣ ಮರಳಿ ಆರೋಗ್ಯ ಪಡೆಯುವ ಪ್ರಯತ್ನ ನಡೆಸಲೂ ಸಾಧ್ಯವಾಗಲಿಲ್ಲ. ವೈದ್ಯಾಧಿಕಾರಿಗಳಾದ ಡಾ॥ ಸಿ. ಗುರುವಪ್ಪನವರು

ಕರುಣೆ ತೋರಿ ಆಶ್ರಯ ಕೊಟ್ಟರು. ದಾದಿಯರ ಮತ್ತು ಇತರ ಸಿಬ್ಬಂದಿ ಯವರ ಅಭಿಮಾನ – ಅನುಕಂಪಗಳು ನನ್ನ ಬದುಕಿಗೆ ಕೊಂಚ ಆಶಾಕಿರಣ ಮೂಡಿಸಿದವು.

ಅಂದಿನಿಂದಲೂ ನನ್ನೊಳಗೆ ಹುದುಗಿದ್ದ ತುಡಿತ – ಮಿಡಿತಗಳ ತಿಕ್ಕಾಟ ಕವನಗಳ ಉದಯಕ್ಕೆ ಕಾರಣವಾಯಿತು. ನನ್ನಲ್ಲಿನ ವ್ಯಥೆ, ಆಸೆ, ಕನಸುಗಳನ್ನೆಲ್ಲಾ ವ್ಯಕ್ತಪಡಿಸಲು ಕಾವ್ಯಕ್ಷೇತ್ರ ರಂಗಭೂಮಿ ಯಾಯಿತು.

ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಅಂತರಂಗದಲ್ಲಿ ನಾನಾ ರೀತಿಯ ಭಾವನೆಗಳು ಮೂಡುವುದು ಸಹಜ. ಇಂತಹ ಭಾವನೆಯನ್ನು ಕಲಾತ್ಮಕ ವಾಗಿ, ಆಕರ್ಷಕ ಪದ ಪುಂಜಗಳೊಂದಿಗೆ ಜೋಡಿಸಿ ಹೆಣೆಯಬಲ್ಲವನೇ ಕವಿ. ಕವಿತ್ವದಲ್ಲಿ ವ್ಯಕ್ತಿಯ ಅನುಭವ ಸೀಮಿತ ಪಥದೊಳಗೆ ಬಂದಿ ಯಾಗಿರುತ್ತದೆ. ಎಲ್ಲರಿಗೂ ಪರಿಚಯವಿರುವ ವಿಷಯದಲ್ಲೇ ಒಂದು ಸೂಕ್ಷ್ಮ ದೃಷ್ಟಿಕೋನದಿಂದ ಪರಿಶೀಲಿಸುವುದು ಕವಿಯ ವೈಶಿಷ್ಟ್ಯ. ಕವಿಯ ದೃಷ್ಟಿಯು ವಿಶ್ಲೇಷಣೆಯಿಂದ ಕೂಡಿ ಪ್ರಾಮಾಣಿಕತೆಯನ್ನು ಬಿತ್ತರಿಸಬೇಕು. ಕವಿವಾಣಿ ಕೆಲವೊಮ್ಮೆ ವ್ಯಂಗ್ಯ. ವಿಡಂಬನೆ, ಕಟು ಟೀಕೆಯಿಂದ ಕೂಡಿರಬಹುದು. ಕೆಲವೊಮ್ಮೆ ಜೊಳ್ಳು ಟೀಕೆ, ಹುಸಿಯೂ ಆಗಿರಬಹುದು. ಒಟ್ಟಿನಲ್ಲಿ ಕವಿ ತನ್ನಲ್ಲಿರುವ ವಿಚಾರ ತನ್ನಲ್ಲೇ ಲಯ ವಾಗದೆ ಪದಗಳ ಮೂಲಕ, ಉಪಮಾನ ಉಪಮೇಯಗಳೊಂದಿಗ ಹೆಣೆದು ಬಿತ್ತರಿಸುತ್ತಾನೆ.

ನಾನು ಬದುಕುತ್ತಿರುವುದೇ ವಿಚಿತ್ರವಾದ ರೀತಿಯಲ್ಲಿ. ಸಮಾಜದ ಸಂಪರ್ಕವಿಲ್ಲದೆ ಗೂಡಿನಲ್ಲಿ ಕುಳಿತ ಗುಬ್ಬಿಯಂತೆ ನಿರಾಶೆ, ವ್ಯಥೆ, ನೋವು ಗಳ ಮನೆ ನಾನು. ರೆಕ್ಕೆ ಮುರಿದ ಹಕ್ಕಿ ತನ್ನಲ್ಲೇ ಗತಕಾಲದ ನೆನಪನ್ನು ಮೆಲುಕು ಹಾಕುತ್ತಾ ಇರುವಂತೆ ನಾನು ಎಲ್ಲೋ ಸ್ವಲ್ಪ ಕೇಳಿದ್ದು, ಕಂಡದ್ದು, ಹೀಗೆ–ಹಾಗೆ ಎಂದು ಕಲ್ಪನೆಯಲ್ಲಿ ತೊಯ್ದಾಡುತ್ತಾ ಹೆಣೆದ ಕವಿತೆಗಳಿವು. ನನಗೆ ಗೊತ್ತಿರುವ ಕೆಲವೇ ವಿಷಯ, ವಾಕ್ಯಗಳಲ್ಲಿ ಪಲ್ಟಿ ಹೊಡೆದು ಸರ್ಕಸ್ ಮಾಡುವ ಪ್ರಯತ್ನ ನನ್ನದು. ಅವು ಕೆಲವು ಸಾರಿ ಚಾರ್ಲಿಗಳಂತೆ ಗೇಲಿಮಾಡಿ ನಗಿಸಬಹುದು, ಕೆಲವೊಮ್ಮೆ ಗಂಭೀರವಾಗಿರ

ಬಹುದು. ನಾನು ಬರೆಯುವುದು ನೋವು ಮರೆಯುವ ಸಲುವಾಗಿ; ಒಂಟಿತನದ ಗುಂಗಿನಿಂದ ಹೊರಬರಲು ನಾನು ಬರೆಯುತ್ತೇನೆ. ಬರೆಯು ವಾಗ ಕ್ಷಣ ಹೊತ್ತು ಬೇರೆ ಭಾವನಾ ಪ್ರಪಂಚದಲ್ಲಿ ವಿಹರಿಸಬಹುದು. ಅದಕ್ಕಾಗಿಯೇ ಈ ಪುಚ್ಚಾಟ. ನನ್ನ ಕವನಗಳಲ್ಲಿ ಒಂದನ್ನಾದರೂ ನೀವು ಮೆಚ್ಚಿ ಸ್ವೀಕರಿಸುವುದಾದರೆ ನನ್ನ ಶ್ರಮ ಸಾರ್ಥಕ; ನೋವಿನಲ್ಲೂ ನಗೆಯ ಮಿಂಚು ಹೊಳೆದು ಕ್ಷಣ ಬೆಳಕಾದರೆ ನಾನು ಧನ್ಯ.

ಯಾವುದೊ ಒಂದು ಆಕಸ್ಮಿಕ ಸಂದರ್ಭದಲ್ಲಿ ಕಲ್ಪತರು ಕಾಲೇಜಿನ ಅಧ್ಯಾಪಕರುಗಳಾದ ಶ್ರೀ ಟಿ. ಕೆ. ಶಿವಣ್ಣ ಹಾಗೂ ಶ್ರೀ ಎಸ್. ತಮ್ಮಾಜಿ ರಾವ್‌ರವರ ಪರಿಚಯದ ಪುಣ್ಯ ಲಭಿಸಿತು. ಅವರು ಕತ್ತಲೊಳಗಿನ ನನ್ನನ್ನು ಮತ್ತು ನನ್ನ ಕವನಗಳನ್ನು ಬೆಳಕಿಗೆ ತರಲು ನಿರಂತರ ಶ್ರಮಿಸಿ ದರು. ಯೋಗ್ಯ ಪರಿಸ್ಥಿತಿ ಒದಗದೇ ಒಂದು ವರ್ಷಕಾಲ ಪ್ರಯತ್ನದಲ್ಲೇ ಕಳೆಯಿತು. ಆಗ ಉತ್ಸಾಹೀ ಯುವಕ ಶ್ರೀ ಹೆಚ್. ಆರ್. ರಘುನಾಥ್ ರವರ ಪರಿಚಯದಿಂದಾಗಿ ಸ್ಥಗಿತವಾಗಿದ್ದ ಕಾರ್ಯಕ್ಕೆ ಮತ್ತೆ ಚಾಲನೆ ದೊರೆಯಿತು. ನಿರಾಶೆಯ ಕಪ್ಪು ಮೋಡಗಳ ಅಂಚಿನಲ್ಲಿ "ಮೌನಗೀತೆ" ಮೂಡಿತು.

ಚಂದಾ ಎತ್ತಿ ಪ್ರಕಟಪಡಿಸಲು ಯೋಚಿಸಿದ್ದ ಕೆಲಸವನ್ನು ತಡೆದು ಉದಾರ ಮನಸ್ಸಿನಿಂದ ತಮ್ಮ ಕ್ಲಬ್ಬಿನ ವತಿಯಿಂದ ಪ್ರಕಟಿಸಲು ತಿಪಟೂರಿನ "ಲಯನ್ಸ್ ಕ್ಲಬ್"ನ ಉತ್ಸಾಹಿ ಅಧ್ಯಕ್ಷರಾದ ಶ್ರೀ ವಿ. ಭವರ್‌ಲಾಲ್‌ರವರು ಪ್ರಕಟನಾ ಕಾರ್ಯವನ್ನು ತೆಗೆದು ಕೊಂಡರು. ಈಗ ಮೌನಗೀತೆಯ ಪ್ರಕಾಶಕರು ತಿಪಟೂರಿನ ಲಯನ್ಸ್ ಕ್ಲಬ್‌ನವರೇ ಆಗಿರುತ್ತಾರೆ.

ನನ್ನ ಕನಸಿನಾಸೆ ನನಸಾಗಲು ಆರಂಭವಾಯಿತು. ಈಗ ಐದು ವರ್ಷಗಳ ಜೀವನವನ್ನು ಆಸ್ಪತ್ರೆಯ ಹಾಸಿಗೆಯಲ್ಲೆ ಕಳೆದಿದ್ದೇನೆ. ಸಹೃದ ಯರ ಪ್ರೀತಿ ವಾತ್ಸಲ್ಯಗಳೆದುರು ನಾನು ಪಟ್ಟಿರುವ ಕಷ್ಟವೆಲ್ಲ ಗೌಣ. ಇದೆಲ್ಲ ಪರಮಾತ್ಮನ ಕೃಪೆಯೆಂದು ನಂಬಿದ್ದೇನೆ. ನನ್ನ ಬದುಕು ಸ್ನೇಹ ಮತ್ತು ಕರುಣೆಯ ನೆರಳಿನಲ್ಲಿ ಸಾಗುತ್ತಿದೆ. ಸಹೃದಯರ ಪ್ರೀತಿ ನನ್ನ ನಾಡಿಯನ್ನು ಮಿಡಿಸುತ್ತಿದೆ. ಮುಂದಿನದು ದೇವರ ಚಿತ್ತ.

**ತುಂಬು ಹೃದಯದ ಕೃತಜ್ಞತೆಗಳು :**

ಅಂಧಕಾರದ ಒಳಗೂ ಆಶಾಕಿರಣ ಮೂಡಿಸಿದ ಪೂಜ್ಯ ಗುರುಗಳಾದ ಶ್ರೀ ಎಸ್. ತಮ್ಮಾಜಿರಾವ್ ಹಾಗೂ ಶ್ರೀ ಟಿ. ಕೆ. ಶಿವಣ್ಣ ಇವರಿಗೆ–ಕನಸಾಗಿದ್ದ ನನ್ನ ಆಸೆಯನ್ನು ನನಸಾಗಿಸಿದ ಲಯನ್ ವಿ. ಭವರ್‌ಲಾಲ್ ಓಸ್ವಾಲ್ ಹಾಗೂ ತಿಪಟೂರಿನ ಲಯನ್ಸ್ ಕ್ಲಬ್ ಸದಸ್ಯರುಗಳಿಗೆ–

ವಿವಿಧ ರೀತಿಯಿಂದ ಸಹಾಯ ಹಸ್ತ ನೀಡುತ್ತಿರುವ ಮಿತ್ರ ಹೆಚ್. ಆರ್. ರಘುನಾಥ್‌ರವರಿಗೆ, ಹರಕೆಯನ್ನು ಬರೆದು ಆಶೀರ್ವದಿಸಿದ ಶ್ರೀ ಹೀ. ಚಿ. ಶಾಂತವೀರಯ್ಯನವರಿಗೆ ಮುಖಪುಟ ಬರೆದುಕೊಟ್ಟ ಶ್ರೀ ಕಮಲೇಶ್‌ರವರಿಗೂ ಅನ್ನ, ನೀರು, ನೆರಳು ಕೊಟ್ಟಿರುವ ಡಾ॥ ಸಿ. ಗುರುವಪ್ಪನವರಿಗೆ ಹಾಗೂ ಈಗ ವೈದ್ಯಾಧಿಕಾರಿಗಳಾಗಿರುವ ಡಾ॥ ಶರಭಲಿಂಗಸ್ವಾಮಿ ಮತ್ತು ಆಸ್ಪತ್ರೆಯ ದಾದಿಯರೂ ಹಾಗೂ ಇತರ ಸಿಬ್ಬಂದಿ ವರ್ಗದವರಿಗೆ. ಪ್ರೀತಿಯ ಹೊನಲನ್ನು ಹರಿಸಿ ನನ್ನಲ್ಲಿ ನವ ಚೇತನ ಮೂಡಿಸಿರುವ ಸ್ಟೆಲ್ಲಾ ಮೆರೀಸ್ ಶಾಲೆಯ ಎಲ್ಲಾ ಸಹೋದರಿಯರಿಗೆ, ತುಂಬಾ ಉತ್ಸಾಹದಿಂದ ಆಸಕ್ತಿವಹಿಸಿ ಮುದ್ರಣ ಕಾರ್ಯವನ್ನು ಚೊಕ್ಕವಾಗಿ ಮಾಡಿಕೊಟ್ಟ ತಿಪಟೂರಿನ ಚೇತನ ಪ್ರಿಂಟರ್ಸ್ ಮಾಲೀಕರಾದ ಶ್ರೀಮಾನ್ ಡಿ. ವಿ. ಎಸ್. ಗುಪ್ತ ಹಾಗೂ ಅವರ ಕೆಲಸಗಾರರಿಗೆ. ಪ್ರೀತಿಯ ಮಳೆ ಸುರಿಸಿ ಬದುಕುವ ಭರವಸೆ ಮೂಡಿಸಿರುವ ನನ್ನ ಎಲ್ಲ ಸೋದರ ಸೋದರಿಯರಿಗೆ, ನನ್ನ ಶ್ರೇಯಸ್ಸನ್ನು ಕೋರುವ ಅನೇಕ ಹಿರಿಯರಿಗೆ.

ಇಂತಿ ತಮ್ಮವ,

ಸೆಪ್ಟಂಬರ್ 1985

ಟಿ. ಎಂ. ಷಡಕ್ಷರಿ

# ಎರಡನೇ ಮುದ್ರಣಕ್ಕೆ ಒಂದೆರಡು ಮಾತು

ನನ್ನ ಪ್ರೀತಿಯ ಕೃತಿ 'ಮೌನಗೀತೆ' ಇಷ್ಟು ಬೇಗ ಎರಡನೆಯ ಮುದ್ರಣ ಕಂಡಿದ್ದು ನನ್ನೆಲ್ಲಾ ಅಭಿಮಾನಿಗಳ ಪ್ರೀತಿಯ ಫಲದಿಂದ. ನನ್ನ ಬದುಕನ್ನು ಬದಲಿಸಿ ಅಪಾರ ಸ್ನೇಹ-ವಾತ್ಸಲ್ಯಗಳು ದೊರೆತದ್ದು ಈ ಕೃತಿಯಿಂದಲೇ ಎಂಬುದನ್ನು ಮರೆಯಲಾರೆ. ನನ್ನ ಬಹುದಿನದ ಆಸೆ, ಖ್ಯಾತ ಕವಿಗಳೂ ವಿಮರ್ಶಕರೂ ಆದ ಡಾ॥ ಜಿ. ಎಸ್. ಶಿವರುದ್ರಪ್ಪನವರ ಆಶೀರ್ವಚನ ಈ ಮುದ್ರಣದಲ್ಲಿ ಸಾಧ್ಯವಾಯಿತು. ನೂರು ಮಾತುಗಳಲ್ಲಿ ಹೇಳಬೇಕಾದುದೆಲ್ಲವನ್ನೂ ಆಣಿಮುತ್ತಿನಂತೆ ಪದ್ಯರೂಪದಲ್ಲಿ ನಿರೂಪಿಸಿದ್ದಾರೆ. ಅವರಿಗೆ ನನ್ನ ಹೃದಯಪೂರಕ ವಂದನೆಗಳು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಜಂಟಿ ನಿರ್ದೇಶಕರಾದ ಶ್ರೀಯುತ ಕೆ. ಸಿ. ಶಿವಪ್ಪನವರು ತುಂಬಾ ಆಸಕ್ತಿಯಿಂದ ನನಗೆ ನೆರವಾಗಿದ್ದಾರೆ. ಸರಕಾರದ ಪರವಾಗಿ ಸಾವಿರ ಪ್ರತಿ ಕೊಳ್ಳಲು ಅನುಮತಿಯಿತ್ತಿದ್ದಾರೆ. ಇವರಿಗೆ ನಾನು ಸದಾ ಋಣಿ. ತಿಪಟೂರಿನ ಎಲ್ಲಾ ಹಿರಿಯರನ್ನೂ ಮಿತ್ರರನ್ನೂ ಸ್ಮರಿಸುತ್ತೇನೆ.

ನನ್ನ ಬದುಕಿಗೊಂದು ಹೊಸ ಬೆಳಕು ನೀಡಲು ಶ್ರಮಿಸಿ ಆಸಕ್ತಿಯಿಂದ ಚಿಕಿತ್ಸೆ ನೀಡುತ್ತಿರುವ ಡಾ॥ ಪಿ. ವಿ. ಐತಾಳರವರನ್ನು (ಶೇಖರ್ ನರ್ಸಿಂಗ್ ಹೋಂ, ಬೆಂಗಳೂರು) ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ವಂದಿಸುತ್ತೇನೆ. ಮತ್ತು ಮುದ್ರಣ ಕಾರ್ಯವನ್ನು ಚೊಕ್ಕವಾಗಿ ನಿರ್ವಹಿಸಿದ ಬೆಂಗಳೂರಿನ ಅಕ್ಷಯ ಮುದ್ರಣದ ಮಾಲೀಕರುಗಳಿಗೆ ಹಾಗೂ ಅವರ ಕೆಲಸಗಾರರಿಗೆ ನನ್ನ ನಮನಗಳು.

ಮಿತ್ರರ-ಅಭಿಮಾನಿಗಳ ಪ್ರೋತ್ಸಾಹವೇ ನನ್ನ ಬೆನ್ನೆಲುಬು. ಎಲ್ಲರ ಪೂರ್ಣ ಸಹಕಾರವೇ ನನ್ನ ಬದುಕಿಗೆ ಆಧಾರ. ನನ್ನ ತಪ್ಪು-ಒಪ್ಪುಗಳನ್ನು ತಿದ್ದಿ ಮಾರ್ಗದರ್ಶನ ನೀಡುವ ಹಿರಿಯರೆಲ್ಲರಿಗೂ ವಂದನೆಗಳು.

ನವೆಂಬರ್ 1986 ಟಿ. ಎಂ. ಷಡಕ್ಷರಿ

# ಪರಿವಿಡಿ

## "ಮೌನಗೀತೆ"ಯ ಕವಿಯನ್ನು ಕುರಿತು

ಕಾಲಿಲ್ಲದ ಈ ಅನಾಥ ಹುಡುಗ
ನಡಸುತ್ತಾನೆ ಕವಿತೆಯ ಹಡಗ.
ಸುತ್ತಲು ಮೊರೆದಿದೆ ಕರಾಳ ಕಡಲು
ನಡುವೆ ಒಬ್ಬನೇ, ಹಬ್ಬಿದೆ ದಿಗಿಲು.
ನಮಗೂ ನಿಮಗೂ ದಡವಿರಬಹುದು
ಆ ಭರವಸೆಯೂ ಈತನಿಗಿರದು.
ಹಸಿರು ತೀರಗಳ ಕನಸನು ಕಂಡು
ಅದಮ್ಯ ಧೈರ್ಯವ ತುಂಬಿಸಿಕೊಂಡು
ಹಾಡುತ್ತಾನೆ ಪ್ರೀತಿ-ಸ್ನೇಹಗಳ
ಮರೆಯುತ್ತಾನೆ ತನ್ನ ಬವಣೆಗಳ.
'ಮೌನಗೀತೆ'ಯಲಿ ಮಿಡಿಯುವನೀತ
ನೋವಿನ ತಂತಿಯ ಸ್ವರ ಸಂಗೀತ.

ನವಂಬರ್ 1986 —ಜಿ. ಎಸ್. ಶಿವರುದ್ರಪ್ಪ

# ಪಂಜರದ ಪಕ್ಷಿ

ಏನು ಹಾಡಲಿ
ಪಂಜರದ ಪಕ್ಷಿ ನಾನು.

ಬಂಧು ಬಳಗವ ತೊರೆದು
ಗೆಳೆಯರ ಹಿಂಡನು ಮರೆತು
ಒಂಟಿಯಾಗಿಯೇ ಹಾಡಲೇನು?

ಹಗಲು ರಾತ್ರಿಗಳೊಂದೆ
ನೋವು ನಲಿವುಗಳೊಂದೆ
ಬಿಡಿಸಲಾಗದ ಬಂಧ – ನನ್ನ ಈ ಬದುಕು.

ನೀಲಿ ಬಾನಿನ ಕನಸು
ಹಾಲ ಬೆಳದಿಂಗಳ ಕನಸು
ಲೀಲವಾಗಿ ಹಾರಲೆನಗೆ ಸ್ವಾತಂತ್ರ್ಯವಿಲ್ಲ

ಒಡೆಯ ಕೊಟ್ಟಿರಡಕ್ಕಿ ಕಾಳಿಗಾಗಿ
ನಾನೊಮ್ಮೆ ಹಾಡಲೇಬೇಕು
ಅವನ ಮನಕೆ ಹರುಷ ತರಲು – ನಾ ಹಾಡಬೇಕು.

ನೊಂದ ಜೀವದ ಮೇಲೆ
ಆನಂದ ಮಹಲ ಕಟ್ಟುವ ಈ ಜನಕಾಗಿ
ನನ್ನೆದೆಯ ಅಳಲನು ಮರೆತು – ನಾ ಹಾಡಬೇಕು.

ಬಿಡುಗಡೆ ಇಹುದೇ ಇಲ್ಲಿಂದ
ಕನವರಿಕೆಯಲಿ ಕಾಲ ಕಳೆಯುತ್ತಾ
ನಗೆಯ ಮುಖವಾಡ ಧರಿಸಿ
ಒಮ್ಮೆ ನಾ ಹಾಡಬೇಕು – ಪರರಿಗಾಗಿ.

# ನೆನಪು

ಕನ್ನಡಿಯಲ್ಲಿ ನನ್ನ ಮುಖ
ಕಂಡಾಗಲೆಲ್ಲಾ ನನಗನ್ನಿಸುತ್ತೆ—
ಬಾಣಂತಿಯಂತೆ ಬಿಳಿಚಿದ ಮುಖ
ಗಾಜಿನಗೋಲಿಯಂಥಾ ನೀರಸ ಕಣ್ಣು
ಇಪ್ಪತ್ತಾದರೂ ಗಂಡಸುತನದ
ಗುರುತಿಲ್ಲವಲ್ಲಾ ??? – ನಾಳೆಯಿಂದ
ಬಿಸಿಲಲ್ಲಿ – ಅಡ್ಡಾಡೋಣ ಎಂದುಕೊಂಡು
ಕನ್ನಡಿಯ ಸ್ವಲ್ಪ ಕೆಳಕ್ಕೆ ವಾಲಿಸಿದರೆ
ಆಶ್ಚರ್ಯ –
ಕೈ ಕಾಲುಗಳೆಲ್ಲ ಬೇರುಕಿತ್ತ ಬಳ್ಳಿಯಂತೆ
ಸುರುಳಿಯಾಗಿವೆಯಲ್ಲಾ ???   ನಾಳೆಯಿಂದ
ವ್ಯಾಯಾಮ ಮಾಡೋಣ ಅಂದುಕೊಂಡಾಗಲೆ
ನರ್ಸ್ ಆಗಮಿಸಿ,
ಕಹಿಗುಳಿಗೆ ಕೈಗಿತ್ತಾಗ ಜ್ಞಾಪಕವಾಗುತ್ತೆ
ನಾನು ರೋಗಿ ಎಂದು.
ಆದರೇನಂತೆ
ಗಾಳಿಯಲ್ಲಿ ಅಡ್ಡಾಡಿದರೆ
ಮೈ ಹಗುರಾಗುತ್ತೆ ಎಂದು
ಎದ್ದು ನಿಲ್ಲತೊಡಗಿದಾಗ – ನೆನಪಾಗುತ್ತೆ
ಅಂಗವಿಕಲ ಎಂದು.
ಆಸರೆಗೆ ಕೂಗೋಣ ಎಂದು
ಬಾಯಿ ತೆರೆದಾಗ – ನೆನಪಾಗುತ್ತೆ
'ಅನಾಥ' ಎಂದು.

# ನನ್ನ ಪಥ

ಉ. ಮ. ಎ. ಹೌದು ಇಷ್ಟೆ
ಉಂಡೆ
ಮಲಗಿದೆ
ಎದ್ದೆ.

ಉಣುವಾಗ ಸಂಕಟ
ಏಕೆ ? ನಾನು ಗಳಿಸಿದ್ದಲ್ಲ
ಬೆವರಿಳಿಸಿ ಪಡೆದದ್ದಲ್ಲ
ಎಲ್ಲೋ ಹೇಗೋ
ಅನಾಥನೆಂದು
ಅಂಗಹೀನನೆಂದು
ಕನಿಕರದಿಂದ
ಪಡೆದ ತುತ್ತು.

ಮಲಗಿದೆ—
ಅಲ್ಲೇ ಎಲ್ಲಾ ಸ್ವರ್ಗ
ಕಾಣಬಾರದ್ದನ್ನೆಲ್ಲಾ
ಕನಸಿನಲಿ ಕಂಡು ಖುಷಿ
ಸಿಕ್ಕಿದ ಸೂರಿನಡಿ ನಿದ್ದೆ
ನಗ– ನಾಣ್ಯ ಕದಿಯುವರೆಂಬ ಭಯವಿಲ್ಲ
ಏಕೆಂದರೆ, ನಾನು ಭಿಕಾರಿ.

ಹೆಂಡತಿ ಮಕ್ಕಳ ಕಾಟವಿಲ್ಲ
ಏಕೆಂದರೆ ನಾನು ಸನ್ಯಾಸಿ
ಸುಳ್ಳಾದರೂ ಹೇಳಿ
ಜನ ಮೆಚ್ಚಿಸಬೇಕು.

ಛೀ, ಥೂ ಅನ್ನುವರೆಷ್ಟೋ ಮಂದಿ
ಅಯ್ಯೋ ಪಾಪ ಅನ್ನುವರೆಷ್ಟೋ ಮಂದಿ
ಯಾರೇನೇ ಅಂದರು ಕಿವುಡು
ಅಂತೂ ಇಂತೂ ಭಂಡತನದ ಬಂಡಿಯನ್ನು
ಉ. ಮ. ಎ. ಪಥದಲ್ಲಿ ಎಳೆಯುತ್ತಿದ್ದೇನೆ.

# ವಿರಾಮ

ನನ್ನ ಬದುಕು
ಪೂರ್ಣ ವಿರಾಮ
ಅಲ್ಲಿಂದ ಮುಂದೆ ?
ಎಂಬ ಅಲ್ಪವಿರಾಮವಿಲ್ಲ.

ಎಷ್ಟು ಚೆನ್ನಾಗಿತ್ತು ಗೊತ್ತಾ !
ಎಂಬ ಆಶ್ಚರ್ಯಕಾರಕ ಚಿಹ್ನೆ ಇಲ್ಲ
ಮುಂದೇನು ?
ಎಂಬ ಪ್ರಶ್ನೆಗಳ ತೊಡರು ಇಲ್ಲ.

ಪೂರ್ತಿ ಜವಾಬ್ದಾರಿಯನ್ನು
ಕಾಣದ ದೇವರ ಮೇಲೆ ಹೊರಿಸಿ
ಕೈಕಟ್ಟಿಕೊಂಡು, ನನ್ನ ಬದುಕಿಗೆ
ಪೂರ್ಣ ವಿರಾಮ ನೀಡಿದ್ದೇನೆ.

# ವಿಧಿ ಎದುರು

ಈಗಲಾದರೂ ಸಮಾಧಾನವಾಯಿತೇನು
ವಿಧಿಯೇ ನಿನಗೆ ?

ನೂರಾರು ಬಯಕೆ ತೊಟ್ಟು
ಬೆಳೆಯುತ್ತಿದ್ದ ಸಸಿ
ಬೇರು ಕತ್ತರಿಸಿ ಉರುಳಿತಲ್ಲಾ
ಈಗ ನಿನಗೆ ಶಾಂತಿ ಸಿಕ್ಕಿದೆಯೆ ?

ಫಲವಿಲ್ಲ ; ನೆರಳಿಲ್ಲ
ಎಂದಾದರೊಂದು ದಿನ
ಜನರ ಕಾಲಡಿ ಮಣ್ಣಾಗುತ್ತೆ
ಆಗ ಸಿಗಬಹುದು ನಿನಗೆ ಪೂರ್ಣ ತೃಪ್ತಿ.

ಕರುಣೆಯ ಮಳೆ ಹೊಯ್ದರೇನು ?
ಮಮತೆಯ ಗೊಬ್ಬರ ಸುರಿದರೇನು ?
ಹೀರಿಕೊಳ್ಳಲು ಬೇರುಗಳೇ ಇಲ್ಲವಲ್ಲಾ
ಈಗ ನೀನು ನಗುತ್ತಿರಬಹುದು ; ಅಲ್ಲವೆ ?

ನನ್ನ ಕಾರ್ಯದಲಿ
ಕೊಂಕೇ ಇಲ್ಲವೆಂದು
ಇದೋ ನೋಡು ವಿಧಿಯೇ
ನಿನ್ನ ಕಾರ್ಯವ ನೀನು ಮಾಡುತ್ತಿರು.
ನಿನ್ನೆದುರು ಛಲ ತೊಟ್ಟು ನಾನು
ಬದುಕಲೆತ್ನಿಸುತ್ತೇನೆ.

## ರಸನಿಮಿಷ

ಪಾಳು ದೇಗುಲದೊಳಗೆ
ತಿರುಕ ಕನಸು ಕಂಡಂತೆ
ನನ್ನ ಆಸೆ ಬೆಳೆಯುತ್ತೆ
ಎವರೆಸ್ಟಿನೆತ್ತರಕ್ಕೆ

ಪ್ರೇಮ ಕಾಮಗಳ ಆಳದಲಿ
ಬಂಗಲೆ – ಕಾರುಗಳ ಕನವರಿಕೆಯಲ್ಲಿ
ಮದುವೆ – ಮಡದಿಯರೊಡನೆ ವಿಹರಿಸುತ್ತೆ
ನಿಜಸ್ಥಿತಿಯರಿವು ನಗು ತರಿಸಿ
ಮರುಕ್ಷಣದಲ್ಲೇ ನೋವಿನ ಈಟಿ
ಹೃದಯ ಮೀಟುತ್ತೆ

ಬಿಗಿದು ಉಬ್ಬಿದ ದೇಹ
ಕುಗ್ಗಿ ಕರಗುತ್ತೆ
ನಾನು ಮಾಂತ್ರಿಕನ ಕೈಗೊಂಬೆ
ಎಂಬುದು ನೆನಪಾಗುತ್ತೆ

ಕನಸಿನ ರಸನಿಮಿಷಗಳು
ಹಸಿ ಹಸಿಯಾಗಿ ಉಳಿಯುತ್ತೆ
ಹೂದೋಟವಾಗಿದ್ದ ಮನ
ಮರಳುಗಾಡಾಗುತ್ತೆ.

# ಮನಸ್ಸು

ನಾನು ಹೊರಗೆಲ್ಲೂ ತಿರುಗಾಡಿಲ್ಲ, ಆದರೆ
ನನ್ನ ಮನ ನನ್ನಂತೆ ಮಲಗಿಲ್ಲ.
ಅದಕ್ಕೆ ಸ್ವಲ್ಪವೂ ಪುರುಸೊತ್ತಿಲ್ಲ
ಆಕಾಶದಲಿ ತೇಲುತ್ತೆ, ಕಾಡು ಮೇಡೆಲ್ಲಾ ಅಲೆಯುತ್ತೆ ;
ಹುಡುಗಿಯರೊಡನೆ ಲಲ್ಲೆ ಹೊಡೆಯುತ್ತೆ.

ಕೆಲವೆಡೆ ಸಂಸಾರಿಯಾಗುತ್ತೆ
ಕೆಲವೆಡೆ ಸನ್ಯಾಸಿಯಾಗುತ್ತೆ
ಸಾವಿರ ರೂಪ ತೊಟ್ಟು ತಿರುಗುತ್ತಾ
ವಾರ್ತೆಗಳ ತರುತ್ತೆ.

ನಾನು ಮಲಗಿದ್ದರೂ ಅದಕೆ ಬಿಡುವಿಲ್ಲ
ಅದಕ್ಕೆ ದಣಿವೆಂಬುದೇ ತಿಳಿದಿಲ್ಲ
ಅಂಗವಿಕಲನ ಶರೀರದಲ್ಲಿರುವೆನೆಂಬುದ ಮರೆತು
ಹುಚ್ಚುಹುಚ್ಚಾಗಿ ಕುಣಿಯುತ್ತೆ.

ನನ್ನ ಮನದ ಕಲ್ಪನೆಯ ಸವಿ
ವಾಸ್ತವದಲ್ಲೂ ಇರಲಾರದು; ದೊರೆಯಲಾರದು
ನನ್ನನ್ನೇ ಮೀರಿಸುವ ಚಾಣಾಕ್ಷ
ನನ್ನ ಪರಮಮಿತ್ರ ನನ್ನ ಈ ಮನ
ಆನಂದೋಲ್ಲಾಸದ ಉದ್ಯಾನವನ.

# ಏನಿದರರ್ಥ

ಪ್ರೀತಿ – ಪ್ರೇಮ ಏನಿದರರ್ಥ
ನನಗೆ ಗೊತ್ತಿಲ್ಲ ; ನಿನ್ನ ಪ್ರೀತಿಸುತ್ತೇನೆ
ಎಂದು ಯಾರೂ ನನ್ನಲ್ಲಿ ಪಿಸುಗುಟ್ಟಿಲ್ಲ.

ನನಗೊಂದು ಗೊತ್ತು –
ನಾನು ಪ್ರೀತಿಗೆ ಯೋಗ್ಯನಲ್ಲವೆಂದು.
ಜ್ಯೂನಲ್ಲಿನ ಪ್ರಾಣಿಗಳಂತೆ
ಸಾಲು ಸಾಲಾಗಿ ಬಂದು ನೋಡುತ್ತಾರೆ
ಅವರ ನೋಟ ಪ್ರೀತಿಯೋ? ಕರುಣೆಯೋ?
ಕೇವಲ ಕುತೂಹಲವಿರಬಹುದು !

ಪ್ರೀತಿ–ಪ್ರೇಮವೆಂದು ಎಲ್ಲರೂ
ಹೇಳುತ್ತಾರೆ, ಮಾಡುತ್ತಾರೆ,
ನಾನು –
ನನ್ನ ಕವನಗಳಲ್ಲಿ
ಸಜ್ಜಾದ ಸ್ಥಳಗಳಲ್ಲಿ ಇವನ್ನು
ಮುದ್ದಾಗಿ ಸೇರಿಸುತ್ತೇನೆ.

## ದುಃಖ

ನೀವು ದುಃಖಿಗಳೇ....
ಹಾಗಾದರೆ ನನಗೆ ಕೊಡಿ.
ಏಕೆಂದರೆ ದುಃಖಿಸಿ ನನಗೆ ಅಭ್ಯಾಸವುಂಟು.

ಒಂದೇ ಸಮನೆ ಲಯಬದ್ಧ ರಾಗದಲಿ
ಶಹನಾಯ್ ವಾದನದಂತೆ ಸ್ವರವನೆಳೆಯುತ್ತ
ಅಳುವ ಬಗ್ಗೆ ಟ್ರೈನಿಂಗ್ ಉಂಟು.

ನನ್ನ ಕಣ್ಣುಗಳು –
ನಿರಂತರ ಚಿಮ್ಮುವ ಕಾರಂಜಿಗಳು
ಸುರಿದಷ್ಟೂ ಒಸರುತ್ತವೆ

ನನ್ನ ಮೂಗು –
ಕಣ್ಣುಗಳ ಕೆಳಗಿರುವುದು ತಾನೆ ?
ಅವು ಸುರಿಸಿದಾಗ ಇದು ಹರಿಸುತ್ತದೆ.

ಶೋಕ ಸಮಾರಂಭಕ್ಕೆ ಆಹ್ವಾನಿಸಿ
ನನಗೆ ದುಃಖದ ಹೊರತು ಬೇರೇನೂ ಗೊತ್ತಿಲ್ಲ.

ನೀವು ನಗುತ್ತಿರಿ –
ನಿಮ್ಮ ಹೃದಯಗಳು ಹಗುರಾಗಲಿ
ಸುಗ್ಗಿಯ ಪಯಿರು ತಲೆದೂಗುವಂತೆ
ಬಳ್ಳಿಯಲಿ ಹೂವುಗಳು ಜೋತಾಡುವಂತೆ

ನಾನು ? ಕಣ್ಣೀರಿಡುತ್ತೇನೆ
ಏಕೆಂದರೆ–
ಕಣ್ಣುಗಳಿರುವುದೇ ಅಳುವುದಕ್ಕೆ.

## ಪಂದ್ಯ

ಬಾನಿನಲಿ ಓಡುತಿದೆ
ಒಂಟಿಯಾಗಿಹ ಬಿಳಿಯ ಮೋಡ
ಬೀಸುವ ಗಾಳಿಗೆ ಸಿಕ್ಕಿ
ಚೆಲ್ಲಾ ಪಿಲ್ಲಿಯಾಗಿ

ಹಿಡಿಯಬಹುದೇ ಹರಿದ ಚಿಂದಿಯ
ಎಣಿಕೆ ಇಲ್ಲದ ಚೂರನು
ತಡೆಯಬಹುದೇ ಒಂದುಗೂಡಿಸಿ
ಹುಚ್ಚು ಹಿಡಿದಿಹ ಗುಂಪನು

ಅದರಂತೆ ಆಡಿದೆ ನನ್ನ ಮನವು
ಒಂಟಿತನದ ಆಟವ
ಸಿಕ್ಕ ಸಿಕ್ಕೆಡೆ ಹರಿದು ಓಡುತ
ಎಣಿಕೆಗೆಟುಕದ ಆಟವ

ತಡೆದು ಹಿಡಿಯುವನೆಂಬುದೆಲ್ಲವು
ಬರಿದೆ ವ್ಯರ್ಥದ ಕಲ್ಪನೆ
ಹರಡಿ ಹಬ್ಬಿದ ಆಸೆ ಜಾಲವ
ನಿಂತು ನೋಡುವೆ ಸುಮ್ಮನೆ

ಗುರಿಯೆ ಇಲ್ಲದೆ ಓಡುತಿರುವೆನು
ಗಾಳಿ ತೂರಿದ ದಿಕ್ಕಿಗೆ
ಈ ಓಟದಾಟದ ಪಂದ್ಯದಲ್ಲಿ
ಗೆಲವು ಸಿಕ್ಕುವುದೆಂದಿಗೆ ?

# ಕಲ್ಲು

ಕಲಿಗಾಲದ ಈ ಕಲ್ಲು
ಎಲ್ಲ ಶಕ್ತಿಗೂ ಮಿಗಿಲು.

ಕಲ್ಲಿನಿಂದಲೇ ಸಾಧ್ಯ
ಇತ್ತೀಚಿನ ಎಲ್ಲಾ ಕೆಲಸಗಳು
ಇದು ಅನುಭವ ವೇದ್ಯ.

ಬೇಡಿಕೆಗಳ ಈಡೇರಿಕೆಗೆ
ಕೈಗೆ ಕಲ್ಲು ಬಂದರೆ ಸಾಧ್ಯ !
ವಿದ್ಯಾರ್ಥಿಗಳವಲ್ಲ ಬೇಡಿಕೆಗಳಿಗೂ
ಪಾಶುಪತಾಸ್ತ್ರವೇ ಈ ಕಲ್ಲು.

ಚಂದ್ರನನ್ನು ಮುಟ್ಟಿ ಬಂದವರು
ಬಯಸಿ ತಂದದ್ದು ಕಲ್ಲು
ಸತ್ತವರ ಸ್ಮಾರಕದ ಮೇಲೂ ಕಲ್ಲು
ತಿನ್ನುವ ಅನ್ನದಲ್ಲೂ ಕಲ್ಲು.

ಕಲ್ಲಿಗಿಂತ ಕಠಿಣ
ಇಲ್ಲಿನ ಕೆಲವರ ಮನಸ್ಸು
ಕಲ್ಲಿನಲಿ ಬೆರೆತು ಕಲ್ಲಾಗದಿದ್ದರೆ
ಮೃದುತನದ ಮಂತ್ರ ಹೇಳಿದರೆ
ಬದುಕುವುದು ಸುಲಭವಲ್ಲ
ಕಲ್ಲಿನ ಪಕ್ಕದಿ ಕಲ್ಲಿನ ಹೊರತು
ಕರುಣೆಗೆ ಸ್ಥಳವಿಲ್ಲ.

# ಮುಗ್ಧ ಉತ್ತರ

ಚೆನ್ನಾಗಿದ್ದೀಯೇನಯ್ಯ ರೈತ ?
ಇದ್ದೇನೆ ಸ್ವಾಮಿ ಉಸಿರಾಡಿಕೊಂಡು
ಚೆನ್ನ; ಎಂದರೇನೆಂದು ಇನ್ನೂ ಗೊತ್ತಿಲ್ಲ.

ಮಳೆ ಬೆಳೆ ಹೇಗಿದೆಯಯ್ಯ ರೈತ ?
ನನ್ನ ಕಣ್ಣೀರೆ ಎಷ್ಟೋ ಮೇಲು ಸ್ವಾಮಿ
ಬಿದ್ದ ಕಣ್ಣೀರಿಗೆ ಗಡ್ಡ ಹುಲುಸಾಗಿ ಬೆಳೆಯುತ್ತೆ !

ಮಕ್ಕಳು ಮರಿ ಹೇಗಿದ್ದಾರಯ್ಯ ರೈತ ?
ದಿನ ಬೆಳಗಾದರೆ ಪರರ ಮನೆ ಬಾಗಿಲಲ್ಲಿ
ಕಾಳು ಆಯುವ ಗುಬ್ಬಚ್ಚಿ ಮರಿಯಂತೆ
ಹಾರಾಡುತ್ತಾ, ಹೋರಾಡುತ್ತಾ ಇದ್ದಾರೆ ಸ್ವಾಮಿ !

ನಿನ್ನ ಹೆಂಡತಿ ಆರೋಗ್ಯವಾಗಿದ್ದಾಳೇನಯ್ಯ ರೈತ ?
ಆ ಮುಂಡೆ ಮೋಚಿತು
ಮೂವತ್ತು ವರ್ಷಕ್ಕೆ ಮುದುಕಿ ಆಗಿ
ಮೂಲೆ ಹಿಡಿದಿದ್ದಾಳೆ ಸ್ವಾಮಿ !

ಇದಕ್ಕೆಲ್ಲಾ ಕಾರಣವೇನಯ್ಯ ರೈತ ?
ಆ ಬ್ರಹ್ಮ ಅನ್ನೋ ಬಡ್ಡಿಮಗ
ದೊಡ್ಡವರಿಗೊಂದು ಬಡವರಿಗೊಂದು
ಬರೆದುಬಿಟ್ಟಿದ್ದೇ ಕಾರಣ ಸ್ವಾಮಿ !

# ಈ ಕಾಲದಲ್ಲಿ

ಸತ್ತವರ ಕಂಡಾಗನ್ನುತ್ತಾರೆ –
'ಯಾವುದು ಶಾಶ್ವತ, ಎಲ್ಲರೂ ಮಣ್ಣಾಗಬೇಕೆಂದು'.

ಮರುಗಳಿಗೆಯಲ್ಲೆ ಮರೆತು ಆ ಮಾತ
ದೊರಕದುದಕ್ಕೂ ಕೈಚಾಚಿ, ತನ್ನದಲ್ಲದ್ದನ್ನೂ ಬಾಚಿ
ಸ್ವಾರ್ಥದ ಕೆನ್ನಾಲಿಗೆ ಚಾಚಿ, ಸಿಕ್ಕಿದ್ದನ್ನೆಲ್ಲಾ ಮೇದು
ಸದಾ ಅಶಾಂತಿ ಪಥದಲ್ಲಿ ನಡೆಯುವರು.

ದಲಿತರ ಎಲುಬುಗಳ ಮೇಲೆ ಮಹಲುಗಳ ನಗುಮುಖ
ಕಪಟ, ಸುಳ್ಳು, ಮೋಸ, ಸುಲಿಗೆ, ದರೋಡೆಗಳ ರಕ್ತ
ಹದ್ದುಗಣ್ಣಿನಲಿ ಸದಾ ಬೇಟೆಯ ದೃಷ್ಟಿ
ಹೃದಯವಿಲ್ಲದ ಕಂಪ್ಯೂಟರ್ ರೀತಿ
ಸದಾ ಗಳಿಕೆಯೆ ಇವರ ಗುರಿ.

ಏನು ಮಾಡಿದರೇನು ? ಹೆಜ್ಜೆಗೊಂದು ದೇವಾಲಯಗಳ
ಕ್ಷಮಿಸು ! ಕ್ಷಮಿಸು ! ಎಂದು ಪ್ರದಕ್ಷಿಣೆ ಸುತ್ತಿದರಾಯಿ
ದೇವರು ಕ್ಷಮಾಸಾಗರ, ದಯಾಮಯನಲ್ಲವೆ ?
ಇನ್ನೇನು ಬೇಕು ! ಇಹದಲ್ಲೂ ಸುಖ, ಪರದಲ್ಲೂ ಸೌ

ಭದ್ರವಾಗಿವೆ ತತ್ವವಿಚಾರಗಳು ಗ್ರಂಥದಲಿ
ಕೆಲಸವಿಲ್ಲದವರು ಓದಿ ತಿಳಿಯಬಹುದು
ಅನುಷ್ಠಾನಕ್ಕೆ ಮಾತ್ರ ಸಲ್ಲದು
ಅಪ್ಪಿತಪ್ಪಿ ಹೇಳಿದರೆ, ಅವನೊಬ್ಬ ಹುಚ್ಚ ತಿರುಬೋಕಿ
ಮನುಜ ಮುಟ್ಟಿದ ಗುಬ್ಬಿ ಹಿಂಡು ತೊರೆದಂತಾಗುವುದು

# ಬಡವ – ಭೂಪಟ

ಭಾರತದ ಭೂಪಟವೆಲ್ಲಾ
ಬಡವನ ಮೈಯಲ್ಲೇ ಇದೆ

ಉಬ್ಬಿರುವ ಮೂಳೆಗಳೇ ಪರ್ವತ ಶ್ರೇಣಿ
ಗಂಗೆ – ಯಮುನೆಯುರಂತೆ
ಗುಳಿ ಬಿದ್ದ ಕಣ್ಣಲ್ಲಿ ಸದಾ
ಜಲಧಾರೆ ಧುಮುಕಿ ಚೆಲ್ಲಾಡುತ್ತದೆ.

ರಾಷ್ಟ್ರೀಯ ಹೆದ್ದಾರಿಗಳಂತೆ
ಮುಖದ ಸುಕ್ಕು
ಕವಲೊಡೆದ ಉಪರಸ್ತೆಗಳಂತೆ
ಸ್ಪಷ್ಟ ಗೋಚರಿಸುತ್ತವೆ.

ಮರುಭೂಮಿಯು ಬಯಲಂತೆ
ಒಡಲೆಲ್ಲಾ ಕಾದು
ಬಿಸಿಯುಸಿರು ಸೂಸುತ್ತೆ.

ಭಾರತದ ತಲೆ ಮೇಲೆ
ಶ್ರೀಮಂತ ರಾಷ್ಟ್ರಗಳಿರುವಂತೆ
ಮಿದುಳಿನಲ್ಲಿ
ಶ್ರೀಮಂತಿಕೆ ಕನಸು.

ಭೂಪಟದಂತೆ
ಇವನೂ ಒಂದು ಆಕೃತಿ
ರಾಜ್ಯ – ನಗರ ಗುರುತಿಸುವಂತೆ
ಕೈಕಾಲು ಮುಟ್ಟಿ
ಮನುಷ್ಯ ಎನ್ನಬಹುದು.

ಭೂಪಟವ ಯಾವಾಗಲಾದರೂ
ಒಮ್ಮೆ ಬಿಚ್ಚಿ ನೋಡುವಂತೆ
ಓಟು ಕೊಳ್ಳುವಾಗ ತಡಕಿ
ಎಣಿಸಿಕೊಂಡು, ಇಲ್ಲದ ಆಸೆಗಳ ಕೆಣಕಿ
ಮುಗಿಲಿಗೇರಿಸಿ ಕೆಳಕ್ಕೆ ಎಸೆಯುತ್ತಾರೆ
ಹಾಸಿ ಉಂಡು ಬೀಸಿ ಎಸೆದ
ಬಾಳೆ ಎಲೆಯಂತೆ.

ಧೂಳು ಮುತ್ತಿದ ಭೂಪಟ
ತನ್ನ ನಕ್ಷೆಯನ್ನು ತೋರಿಸುವಂತೆ
ಕೊರಗುತ್ತಾ ಕತ್ತೆತ್ತಿ –
"ಬಡವ ಸ್ವಾಮಿ" ಅನ್ನುತ್ತಾನೆ.

# ತೊಡರು

ನೂರು ವರುಷಕ್ಕೆ ಕೊರಗಿ ಸಾಯುವುದರ ಬದಲು
ಮೂರು ದಿವಸ ಮೆರೆದು ಸಾಯುವುದು ಸರಿ !
ಎಂದು ತಿಳಿದವರು ಹೇಳಿದರು.

ಸುಖವೆಂದರೇನು ?
ಹುಡುಕುತ್ತಿದ್ದೇನೆ.
ಸ್ವಿಚ್ಚು ಒತ್ತಲು ಆರುವುದು ಲೈಟು ;
ಕರೆದಾಗ ಹೊರಡಲು ಸಿದ್ಧನಿದ್ದೇನೆ
ಕಾಲ ಕರೆಯುವ ಸೂಚನೆಗಳಿಲ್ಲ !

ಬೆಳೆದು ಬಲಿತಿಹ ದೇಹ
ಸುತ್ತಲೂ ಹೆಣೆದಿದೆ ಸ್ನೇಹ.

ಆಸೆಗಳು ಅಡ್ಡಗಲ್ಲುಗಳಾಗಿ
ತೊಡರುತ್ತಿವೆ ನನ್ನ ಕಾಲಿಗೆ
ಸಾಕೆಂದೂ ಇಲ್ಲ ; ಬೇಕೆಂದೂ ಇಲ್ಲ ;
ಜನ್ಮ ಬೇಡವೇ ಬೇಡವೆಂಬ
ಆಘಾತ ಇನ್ನೂ ಆಗಿಲ್ಲ.

## ಸಂಕೇತ

ನೋಡು,
ಇವ ಕಚ್ಚಾ ಬ್ರಾಹ್ಮಣ.
ಸುಳ್ಳು ಸುಳ್ಳು ವೇದಗಳ
ಸೃಷ್ಟಿಸಿ, ನೀತಿ ನೆವದಲ್ಲಿ ಜಾತಿ –
ಭೇದ ಮಾಡಿ, ಹಾರಾಡುವ ಹಾರುವ
ಜನಿವಾರದಂತೆ.

ಇವ ಕಚ್ಚಾ ಲಿಂಗಾಯಿತ.
ಅವರಿವರ ಗಂಟು
ಸುಲಿಗೆ ಹೊಡೆದು
ಪಟ್ಟೆ ವಿಭೂತಿ ಬಳಿದು
ಬಗಲಲ್ಲಿ ಕಟ್ಟಿರುವ ಪಾಪದ
ಗಂಟು, ಕರಡಿಗೆ.

ಇವ ಕಚ್ಚಾ ಪ್ರಾಟೆಸ್ಟೆಂಟು.
ಇವನಾಡುವ ನುಡಿಯೆಲ್ಲಾ ಸ್ಟಂಟು,
ಹೆಜ್ಜೆ ಹೆಜ್ಜೆಗೂ ಬದಲಾಗುವ ಗೋಸುಂಬೆ
ಇವನ ಹೆಗ್ಗುರುತೇ ಕ್ರಾಸು
ಬದುಕಿನುದ್ದಕ್ಕೂ ಕ್ರಾಸ್.

# ಆಸ್ಪತ್ರೆ

ಸ್ವರ್ಗ – ನರಕಗಳ ಪ್ರತ್ಯಕ್ಷ ದರ್ಶನ ಬೇಕಾದರೆ
ಬನ್ನಿ, ಸರ್ಕಾರಿ ಸಾರ್ವಜನಿಕ ಆಸ್ಪತ್ರೆಗೆ.
ಬಿಳಿಯುಡಿಗೆ ಮೋಹಿಸಿಯಂತಿರುವ
ದಾದಿಯರ ಮುಖದ ಮಿಂಚುನಗೆ
ಸ್ವರ್ಗದಂಚಿಗೆ ನಿಮ್ಮನೊಯ್ಯುವುದು.
ಸಾವು–ಬದುಕಿನೊಡನೆ ಸೆಣದಾಡುವ ರೋಗಿಯ
ಕಂಡೊಡನೆ ನರಕ ಪ್ರತ್ಯಕ್ಷ.
"ಉತ್ಪತ್ತಿ–ಸ್ಥಿತಿ–ಲಯದ" ಕೇಂದ್ರವಿದು – ಆಸ್ಪತ್ರೆ."
ಹೆರಿಗೆ ವಾರ್ಡಿನಲ್ಲಿ ಮೊಗ್ಗೊಂದು ಅರಳಿದರೆ
ವಾರ್ಡಿನಲಿ ಬದುಕಿಗೊಬ್ಬ ಅಂತ್ಯ ಹೇಳುವನು.
ಮುದುಡಿದ ಹೂವಿನ ಮೇಲೆ ಇಬ್ಬನಿಯು ಬಿದ್ದಂತೆ
ಹೊಸ ಸ್ಥಿತಿಯ ಹೊಂದುವನು ಮತ್ತೊಬ್ಬ.
ನರ್ಸ್‌ಗಳ ಕಣ್ ಹೊಡೆತ, ರೋಗಿಗಳ ಎದೆ ಬಡಿತ
ಸುಲಭದಲ್ಲೇ ಗುರುತಿಸುವ ತರುಣ ವೈದ್ಯ,
ಮನೆಯ ನೋವನು ಮರೆತು
ನಗುಮುಖದಿ ಎಲ್ಲರಲ್ಲೂ ಬೆರೆತು
ಮೂವತ್ತು ಮೀರದಿಹ ದಾದಿಯರ
ಬಾಳಿಲ್ಲಿ ಸೇವೆಗೆಂದೇ ನೈವೇದ್ಯ.
ಮೊದಲಿಂದ್ರ ಕೊನೆವರಗೆ ದಾಖಲೆಗಳ ಸರಮಾಲೆ
ಸಾವು ಬದುಕಿನ ಮಧ್ಯೆ ಉಯ್ಯಾಲೆ
ವೈದ್ಯ – ದಾದಿಯರ ರಾಸ – ಲೀಲೆ.

# ನಡುರಾತ್ರಿಯಲ್ಲಿ

ಸುತ್ತಲೂ ಸ್ಮಶಾನ ಮೌನ
ದೂರದಲ್ಲಿ ನಾಯಿ – ನರಿಗಳ ಬೊಗಳೆ.
ಆಗ
ಜಗತ್ತಿನಲ್ಲಿ ನಾನು,
ನಾಯಿ.
ನರಿ ಇವಷ್ಟೇ ಎಚ್ಚರ.

ಅಲ್ಲಿ, ಏನು ಕಂಡು ಕೂಗುತಿವೆ ಇವು ?
ಬೈಗುಳವೊ ?
ಕರೆಯೊ ??
ಮೊರೆಯೊ ???
ಭಾಷೆ ಗೊತ್ತಿದ್ದರೆ ಹೇಳುತ್ತಿದೆ.

ಇಲ್ಲಿ, ನನ್ನೆದೆಯಲ್ಲಿ ಭಾಷೆ
ಇಲ್ಲದ ಮೌನದಾಟ,
ಭೂತ ಪ್ರೇತಗಳ ಕಲ್ಪನೆಯ ಕಾಟ,
ಭಯದಿಂದ ಕೈಯಾಡುವುದು ಅಕ್ಕಪಕ್ಕ
ನಾನೊಬ್ಬನೆ
ಒಂಟಿ,
ನಿಶೆರಾತ್ರಿಯಲಿ 'ದೇವರ' ನೆನಪೇ
ಜಂಟಿ.

ದುಷ್ಯಂತರಿವರು
ಹೊಟ್ಟೆಯುಬ್ಬಿಸಿ ಮಧ್ಯೆ ಕೈಕೊಡುತ್ತಾರೆ.
ಎಚ್ಚರಾ, ತಂಗಿ ಎಚ್ಚರ.
ಇಲ್ಲಂತೂ ತುಂಬಾ ಕಾಡು
ನೀನೊಬ್ಬಳೇ ಶಕುಂತಲೆ.
ಪ್ರೇಮ ಪ್ರೀತಿಯ ಬಿತ್ತಿ
ಕೈ ತೊಳೆದುಕೊಂಡು ದೂರವಿರುತ್ತಾರೆ ;
ಎದುರಿಗೇ ನಿಂತರೂ
"ಯಾರು ನೀನು ?" ಎನ್ನುತ್ತಾರೆ.
ನೆನಪು ತರಿಸಲು ಉಂಗುರವೂ ಇಲ್ಲವಲ್ಲ !
ನಿನ್ನ ಪ್ರೇಮವೆಲ್ಲಾ
ಉರಿದ ಸಿಗರೇಟಿನಂತೆ
ಹಿತಕೊಟ್ಟು ಮರೆಯಾಗಿದೆಯಲ್ಲಾ ?
ನೀನು ತೆರಳಬೇಕಾಗುತ್ತೆ ರೇಟುಗಳ ಬ್ಯಾಡ್ಜು ಧರಿಸಿ
ಅಂತಸ್ತುಗಳ ಲಾಡ್ಜಿಗೆ.

# ಕಾಲ

ನಿರಂತರ ಸುತ್ತುವ
ಚಿರನೂತನ ಪೃಥ್ವಿ

ರಂಗಮಂಟಪದಲ್ಲಿ ನಟ ಮನುಜ
ಇವನಿಗೆ ಕಾಲ ಮುಗಿದಂತೆ ಮರಣವು
"ಕಾಲ"ವೊಂದೇ ಶಾಶ್ವತವು.

ಸೃಷ್ಟಿಯಾದ ಪ್ರತಿ ಜೀವಿಗೂ
ಅಂತ್ಯವೆಂಬ ಅಂಕವುಂಟು
ಕಾಲದೇವನಿಗೆ ಕೊನೆ ಎಲ್ಲಿ ?

ನೂರು ಜನ್ಮ ಮರಳಿದರೂ
ಅವೇ ಹಗಲು ಅದೇ ರವಿಯು
ಇದೇ ಇರುಳು ಅದೇ ಶಶಿಯು.

ನೂರು ವರುಷ ತಪಗೈದರು
ಕಳೆದ ಒಂದು ಗಳಿಗೆಯನ್ನು
ಮರಳಿ ಪಡೆಯಲಾಗದು.

ಯುಗಯುಗಗಳು ಉರುಳಿದರು
ದೇವರೆಷ್ಟೋ ಸಾರಿ ಉದಿಸಿದರು
ಕಡೆಗೆ ಎಲ್ಲ ಕಾಲನಲ್ಲಿ ಕೊನೆ.

## ಎರಡು ಹಾದಿ

ಗಾಂಧಿಯಂಥ ದಡ್ಡರಲ್ಲ
ನಮ್ಮ ರಾಜಕೀಯ ಧಣಿಗಳು.
ಗಾಂಧಿ –
ಅವನದೇ ಒಂದು ಹಾದಿ
ತುಂಡು ಬಟ್ಟೆಯ ತೊಟ್ಟು
ಆಡಹಾಲು ಕುಡಿದು
ಹೊಟ್ಟೆ ಬೆನ್ನಿಗಾನಿಸಿಕೊಂಡು
ಕೋಲು ಹಿಡಿದು ತಿರುಗುತ
ದೇಶವೆಲ್ಲ ಜೊತೆಗಿದ್ದರೂ
ಅಧಿಕಾರವ ತಳ್ಳಿದ.

ಖಾದಿ ತೊಟ್ಟ ನಮ್ಮವರದೇ
ಒಂದು ಹಾದಿ
ಅಧಿಕಾರಕ್ಕೆ ಕಿತ್ತಾಟ
ಪಕ್ಷದಿಂದ ಪಕ್ಷಕ್ಕೆ ಹಾರಾಟ.
ಅಧಿಕಾರವೊಂದೇ ಸಾಕು
ಮಿಕ್ಕಲ್ಲವ ನೂಕು.
ಭವ್ಯ ಬಂಗಲೆ ಕಟ್ಟಿಸಿ
ವಿದೇಶೀ ಕಾರುಗಳಲ್ಲಿ ಜುಂ ಸವಾರಿ –
ಕಣ್ಣು – ಕಿವಿ – ಬಾಯಿ ಮುಚ್ಚಿದ
"ಮೂರು ಕೋತಿ ಸೂತ್ರ"
ಕೊಡುವುದು ಇವರಿಗೆ
ಬೇರೆಯದೇ ಅರ್ಥ.

## ಸತ್ಯ ದರ್ಶನ

ಅಬ್ಬಾ !  ಈ ಬದುಕು
ಅದೆಷ್ಟು ಆಳ ಆಳ ;
ಎತ್ತರ ಅದೆಷ್ಟು.

ಒಬ್ಬೊಬ್ಬರದು ಒಂದೊಂದು ಆಲೋಚನೆ
ಬದುಕು ದುರ್ಬಲಗೊಂಡಾಗ ಇಲ್ಲ
ಸತ್ಯ–ಧರ್ಮಗಳ ವಿವೇಚನೆ.

ಸ್ವಾರ್ಥಕ್ಕಾಗಿ ಅದೆಷ್ಟು ಸುಲಿಗೆ
ಬದುಕು ಉಜ್ವಲಗೊಳಿಸಲು
ಇವರು ಕೇಳುವುದಿಲ್ಲ ಯಾವ ನೀತಿ.

ಅವರವರ ಸಂಸಾರದ ಸುಖ ಮುಖ್ಯ–
ಸ್ವಾರ್ಥ, ಆಸೆ, ಅನೀತಿಗಳ ಆಗರ
ನನ್ನ ವಿಶ್ವಭ್ರಾತೃತ್ವದ ಮಾತು ಆಡುವುದಕ್ಕಷ್ಟೆ.

ಕ್ರಿಮಿ ತಿನ್ನುವ ಕಪ್ಪೆ, ಕಪ್ಪೆ ತಿನ್ನುವ ಹಾವು
ಹಾವು ತಿನ್ನುವ ಹಕ್ಕಿ, ಹಕ್ಕಿ ತಿನ್ನುವ
ಮನುಜ...... ಹೀಗೆ ಬದುಕು
ಒಂದನ್ನು ಇನ್ನೊಂದು ತಿಂದು
ಬದುಕುವುದೇ ಜೀವನದ ಅರ್ಥ.

# ಮೂರು ಮನೆ

ಮಾರಿಯಂತಿರುವ ಈ ಮೂರು
ಮನೆಗಳಿಗೆ ಹೋಗದಿರು ಎಂದೂ
ಬಟ್ಟೆಗಂಟಿದ ಪುಟ್ಟಂಪುರಲೆಯಂತೆ
ಕೈಗಂಟಿದ ಹಲಸಿನಂಟಿನಂತೆ
ಒಮ್ಮೆ ಬೆಳೆಸಿದರೆ ಸಲಿಗೆ
ಬರಲಾರೆಯೀಚೆ ಬದಿಗೆ.

ಮೊದಲ ಮನೆ –
ಇದು ಯಮನ ಆಟದ ತಾಣ
ಕೂಗಾಟ, ನೋವು, ನರಳಿಕೆಯ ಕಾಟ –
ಕರ್ಮಗಳಿಗನುಸಾರ ಶಿಕ್ಷೆ
ಆರೋಗ್ಯವಿದ್ದರೆ ಇದರಿಂದ ರಕ್ಷೆ
ಆಸ್ಪತ್ರೆ.

ಎರಡನೆ ಮನೆ –
ಅಪ್ಪ, ಅಮ್ಮ, ಅಣ್ಣ ತಮ್ಮಂದಿರೊಡನೆ
ಚಕ್ಕಂದದಲಿ ಬೆಳೆದ ಕನ್ಯೆ
ಗಂಡನ ಮನೆಗೆ ಹೋದಂತೆ
ಸಮಯ ಬಂದಾಗ ಗಂಡನ ಒದೆತ
ಅತ್ತೆಯ ಅಶ್ಲೀಲ ಬೈಗುಳದಂತೆ
ಇದೇ ಈ ಜಾಗದ ಮಹಿಮೆ.
ಅನ್ಯಾಯವೇ ಇರಲಿ, ನ್ಯಾಯವೇ ಇರಲಿ,
ಕುನ್ನಿಯಂತೆ ತಲೆ ತಗ್ಗಿಸಿ ನಡೆಯಬೇಕಿಲ್ಲಿ
ಪೋಲಿಸು ಠಾಣೆಯಲ್ಲಿ.

ಮೂರನೆ ಮನೆ –
ನೀನು ಸತ್ತರೂ ನಿನ್ನ ದಾಖಲೆ ಇಲ್ಲುಂಟು
ಒಮ್ಮೆ ಬೆಳಸಿದರೆ ನಂಟು
ಕೊನೆಯಾಗದ ಗಂಟು ;
"ಗೆದ್ದವನು ಸೋತಂತೆ
ಸೋತವನು ಸತ್ತಂತೆ" ಇದೇ ಫಲಿತಾಂಶ
–ಕೋರ್ಟಿನಲ್ಲಿ.

# ಪೂಜಾರಿಗಳು

ಪೂಜಾರಿಗಳು ;
ನಮಗೂ
ದೇವರಿಗೂ ನಡುವೆ ದಳ್ಳಾಳಿಗಳು ;
ನಮ್ಮಂತೆ ಯೋಸಿಜರು
ಆಸೆ ಹೊತ್ತವರು ವಿಶೇಷವಿಲ್ಲದವರು.

ಹಣ್ಣು–ಹೂ–ಕಾಯಿ–ಕರ್ಪೂರಗಳ
ತೋರಿಸಿ ನಾವು ಕೇಳುವುದೇನನ್ನ ?
ಸರ್ವರಕ್ಷಕ ತಂದೆಗೆ ಗೊತ್ತಿಲ್ಲವೇ
ತನ್ನ ಮಕ್ಕಳ ತೊಂದರೆ,

ಫಲಕ್ಕೆ ಸಿಹಿ ತುಂಬಿ ಹೂವಿಗೆ ಕಂಪು ಕೊಟ್ಟ
ಮಹಾಮಹಿಮ ಕೈವಲ್ಯಪತಿಗೇಕೆ
ನಾವೀವ ಕಾಣಿಕೆ ?
ಕೆರೆಯ ನೀರನು ಕೆರೆಗೆ ಚೆಲ್ಲಿದಂತೆ
ಅವನಿತ್ತುದನೆ ಅವನಿಗೀವ ಪರಿ
ಕುಬೇರನಿಗೆ ಕಾಸಿನಾಸೆ ತೋರಿಸಿದಂತೆ.

ದೇವರಿಗೂ ನಮಗೂ ಮಧ್ಯೆ
ಅಜ್ಞಾನ ಅಂಧತ್ವ ಕಂದಕವು
ಇವುಗಳ ದಾಟಿ ಅವನೆಡೆಗೆ ಹೋಗಲು
ಸುವರ್ಣ ಸೇತುವೆಗಳು
[ಎಲ್ಲರೂ ಅಲ್ಲ ಕೆಲವರು]
ಈ ಪೂಜಾರಿಗಳು.

## ನಾಯಿ ಮತ್ತು ಗೌಡ

ನಾಡ ಗೌಡನ ಮನೆಯ
ನಾಯಿ ಸತ್ತಾಗ
ನಾಡಿಗೆ ನಾಡೇ ನೆರೆದಿತ್ತು
ಅಂತ್ಯ ಸಂಸ್ಕಾರಕ್ಕೆ.

ಅಕ್ಕಿ ಚೀಲಗಳ ಖಾಲಿಮಾಡಿ
ಉಂಡೆಲೆಯ ಎಸೆದು ತೇಗಿ
ಗೌಡನ್ನ ಹೊಗಳಿ ಹೊಗಳಿ
ಮಾರನೆಯ ದಿನ ಮನೆ ಸೇರಿದರು,

ಇಕ್ಕುವ ಕೈ ಇದ್ದಾಗ ನೆಕ್ಕುವ ನಾಯಿಗಳು
ಬೆಲ್ಲವಿದ್ದ ಕಡೆ ಇರುವೆ ಸಾಲು ಸಾಲು
ಆದರೆ
ಪಾಪ, ಗೌಡನೇ ಸತ್ತಾಗ
ಒಂದು ನಾಯಿ ಕೂಡ
ಸುಳಿಯಲಿಲ್ಲ.

# ಉತ್ತರ

ವಿಷ ಕುಡಿದು ಸತ್ತ ಯುವಕನ ಸುದ್ದಿ
ನಮಗೆ ಕಲಿಸುವುದೇ ಬುದ್ಧಿ ?
ವಿಷವ್ಯೂಹವ ಭೇದಿಸಲಾಗದ
ಮುಕ್ತಿ ಅಮೃತಕ್ಕೆ ಶರಣಾದ .
ವರ್ಷ ಮಾಡಿದ ಮಡಿಕೆ ನಿಮಿಷದಲ್ಲಿ ಒಡೆದ
ಆತ್ಮಹತ್ಯೆಯ ಬುದ್ಧಿ –
ಬದುಕಿ ಸತ್ತಂತಿರುವ ಹೆಳವರಿಗೆ
ಬದುಕಿಗಾಗಿ ಹೋರಾಡುವ ನಿಮ್ಮಂತವರಿಗೆ
ರಂಗುರಂಗಿನ ಚಿತ್ತಾರದ ಸುಂದರ
ಕನಸು ಕಾಣುವನ ಬದುಕು ದುರ್ಬಲವಾದಂದು
ಸಿಗುವ ದಿಢೀರುತ್ತರ
--ಸಾವು, ಸರಿಯಲ್ಲವೆಂಬ ಸುದ್ದಿ .

## ತಬ್ಬಲಿ

ಎಲ್ಲರನು ಅಮ್ಮಾ ! ಎಂದು
ಎಲ್ಲರನು ಅಪ್ಪಾ !! ಎಂದು
ಕೂಗುತಿದೆ ತಬ್ಬಲಿಯ ಕಂದವೊಂದು.

ಅಮ್ಮನ ನೆನಪನ್ನೂ ಕಾಣೆ
ಅಪ್ಪನ ಮುಖವನ್ನೂ ಕಾಣೆ
ಎಲ್ಲರೂ ನೀವೆ ದೇವರಾಣೆ.

ಅಮ್ಮಾಯೆಂದರೂ ಮುತ್ತ ನೀಡಲಿಲ್ಲ
ಅಪ್ಪಾಯೆಂದರೂ ಒಂದು ಅಪ್ಪಲಿಲ್ಲ
ಏಕೆಂಬ ಅರ್ಥ ಇನ್ನೂ ಗೊತ್ತಾಗಲಿಲ್ಲ.

ಇದೊಂದು ಪರದೇಶಿ ಎನ್ನುವರು
ನಕಲಿ ತಂದೆ – ತಾಯಿಯರು
ತಂದೆ – ತಾಯಿಯನೆ ತಿಂದಿರುವೆ.

ಏಳಲಾರದ ಹೆಳವ ಕೂಸೊಂದು
ಕೂಗುತಿದೆ ಎಲ್ಲರನೂ –
ಅಮ್ಮಾ ಎಂದು,

# ನ ವಿ ಲು

ಯಾವ ರಸಿಕ ಕುಂಚ ಹಿಡಿದು
ರಚಿಸಿದಂಥ ರೂಪವೊ ?
ಗರಿಯ ತುಂಬ ಕಣ್ಣ ತೆರೆಯೆ
ಬಣ್ಣಗಳ ಸಮೂಹವೊ

ಕತ್ತನೆತ್ತಿ ಕೂಗಲೊಮ್ಮೆ
ಮೈ ಮನ ರೋಮಾಂಚನ
ಕಣ್ ತುಂಬುವ ಆದರ ಲಾಸ್ಯ
ಹೊಸ ಲೋಕದ ದರ್ಶನ.

ನಾಟ್ಯರಾಣಿ ಶಾಂತಲೆಯ
ನಾಚಿಸುವ ನೃತ್ಯವು
ಬಳ್ಳಿಯನ್ನು ಮೀರಿಸುವ
ಕೊಂಕು ಕೊರಳ ಆಟವು

ಯಾರ ಮನದ ತೃಪ್ತಿಗಾಗಿ
ಗರಿಯ ಕೆದರಿ ಕುಣಿಯುವೆ ?
ಈ ಅಂದಕೆ ಈ ಕುಣಿತಕೆ
ಸಾಟಿಯುಂಟೆ ಜಗದಲಿ.

ಯಾರ ಮನವ ಮೆಚ್ಚಿಸಲು
ಇಂಥಾ ಘನ ವೈಭವ
ನಿನ್ನ ಸೃಷ್ಟಿಗೈದ ದೇವ
ನಿಜವಾಗಿಯೂ ದೊಡ್ಡವ.

# ಹರೆಯದಲ್ಲಿ

ಹರೆಯ ಬರುವ ಕಾಲದಲ್ಲಿ
ಬರವುಂಟೆ ಭಾವನೆಗೆ ?
ಶರಧಿಯ ಸೇರುವ ನದಿಯಂತೆ
ಧುಮ್ಮಿಕ್ಕಿ ಓಡುವುದು ಕಾತುರದಿ.

ಮೈಯ ಕಣಕಣದಲ್ಲೂ ಹೊಮ್ಮುತಿದೆ ಉತ್ಸಾಹ
ಚಿಮ್ಮುವುದು ಚೈತ್ರದ ಚಿಗುರಿನಂದದಲಿ
ಭಾಷೆ ಬರೆಯದ ಭಾವರಾಗವನು
ಹಾಡುವುದು ಕೋಗಿಲೆಯು ಅಂತರಾಳದಲಿ.

ಬೆಡಗು ಬಿನ್ನಾಣಗಳ ಕಂಡ ಕಣ್ಣುಗಳು
ನೀಡುವುದು ಹೃದಯಕ್ಕೆ ಹಿತವಾದ ತಲ್ಲಣ
ನೋವಿನ ಅರಿವೇ ಇಲ್ಲ ಇಂಥ ಯೌವನಕೆ
ಹಗಲುಗನಸಿನಲಿ ಮನಕೆ ರಸದೌತಣ.

ತೊಡೆಗಳ ನಡುವಿನ ಗುಬ್ಬಚ್ಚಿ
ಮಿಂಚುಗುಡುವುದು ಉಬ್ಬಿ ಉಬ್ಬಿ
ಕಾಯುವುದಾವುದೋ ಒರುವಿಕೆಗೆ ಜೊಲ್ಲು ಸುರಿಸಿ
ಬಣ್ಣದ ಭಾವಗಳ ಜೊತೆಗೆ ಬೆರೆಸಿ.

ಮೊಲೆ ಮೂಡಿ ಬರುವಾಗ ನೆಲ ಕಾಣದಾಗುವುದು
ಮೀಸೆ ಕುಡಿಯೊಡೆವಾಗ ದೇಶವೇ ಕಾಣಿಸದು
ನಡೆದದ್ದೆ ದಾರಿ ಹರೆಯದ ಮದ್ದಾನೆಗೆ
ಒಮ್ಮೆ ಕಳೆದರೆ ಮತ್ತೆ ಬಾರದು ಬಾಳಿನೊಳಗೆ.

# ರವಿ ಮೂಡಿದಾಗ

ಮೂಡುತಿಹ ನೋಡಲ್ಲಿ
ನೆತ್ತರದೊಳಗಿಂದ ನೇಸರ.

ಸೂಸುತಿಹ ಚೈತನ್ಯ ಕಿರಣ
ನಿದ್ದೆ ಮಂಪರಿಗೆ ಬಾಣ.

ಹೆಂಗಳೆಯರು ಅಂಗಳದಿ
ಬರೆಯುತಿಹರು ಬದುಕಿನ ಚಿತ್ತಾರ.

ಬೆಡಗಿನ ಎಳೆ ಹುಡುಗಿಯ ತೆರದಿ
ಮೈ ಬಿಸಿಯೇರಿ ಬಿರಿಯುತಿದೆ ಪುಷ್ಪ.

ಕೊರಳ ಗಂಟೆ ಕಿಣಕಿಣಿ ನಾದದಲಿ
ಬಿಸಿಲಿನಲಿ ಕುಣಿಯುತಿದೆ ಎಳೆಗರು.

ದೊಂಬರ ಡೋಲು ಕರೆ ಕರೆಯುತ್ತಿದೆ
ಎಳೆಯರ ಬಳಗವನ್ನು.

ಸಿಕ್ಕುಗಟ್ಟಿದ ತಲೆಸುಕ್ಕ ಬಿಡಿಸುತಿಹರು
ನೇಗಿಲ ಬಾಚಣಿಕೆಯಲಿ ಹಳ್ಳಿ ಹೈದರು.

ದಿಕ್ಕು ದಿಕ್ಕಿನೊಳು ಮೊಳಗುತಿದೆ ಹಗಲ ಕಹಳೆ
ಎಲ್ಲೆಡೆಯೂ ಕಾಣುತಿದೆ ವೈಭವದ ಲೀಲೆ.

# ಭಾವಗೀತೆ

ಇಷ್ಟು ಚಿಕ್ಕದೆಯ ಬತ್ತಳಿಕೆಯಲ್ಲು
ಅದೆಷ್ಟು ಬಯಕೆಗಳ ಕಾಮನ ಬಿಲ್ಲು.

ಭಾವನೆಯಡಿಯಲ್ಲಿ ಬಳಿದಿರುವ ಬಣ್ಣಗಳು
ಒಂದಾಗಿ – ಕೂಡಿ ರಂಜಿಸುತ್ತಿವೆಯೋ ?

ಕನಸಿನಾಳಕೆ ಇಳಿದು ಈಜಾಡುತಲಿ ನಲಿದು
ಕನವರಿಕೆಯಾಗುತಿದೆ ಹಗಲಿನಲ್ಲೂ.

ನಿದ್ದೆ ನಾಗನ ತಟ್ಟಿ ಕೆರಳಿಸಿದ ತೆರದಲ್ಲಿ
ಬುಸುಗುಟ್ಟಿ ಭೋರ್ಗರೆಯುತಿದೆ ಭಾವ ಇಲ್ಲಿ:

ಪುಂಗಿನಾದಕೆ ಮೈಮನವೆಲ್ಲ ಮರೆತಿರಲು
ಸುಳಿಯಿತೊಂದು ನೆನಪು
ದೃಷ್ಟಿಪಟಲದ ಮೇಲೆ ನಿಂತಿತೊಂದು 'ಚೆಲುವು'
ಎದೆಯ ಕೋಣೆಯ ಒಳಗೆ
ಆ ಚೆಲುವ ಕುಳ್ಳಿರಿಸಲು
ಒಳಗಣ್ಣಿಗೆ ಗೋಚರಿಸಿತು ಬಾಳಗೀತೆ –
ನಾ ಕಂಡ ಭಾವಗೀತೆ.

# ಉದ್ಯಾನವನದಲ್ಲಿ

ಮುಳ್ಳುತಂತಿಗೆ ಮುತ್ತಿಟ್ಟು
ತಲೆಯೆತ್ತಿ ತೊನೆಯುವ ಬಳ್ಳಿ
ನಯವಾಗಿ ಅಲುಗುತಿದೆ ತಿಳಿಗಾಳಿಗೆ.

ಅಡ್ಡಗಲ್ಲುಗಳ ದಾಟಿ
ಒಳಗೆ ಅಡಿಯಿಟ್ಟಾಗ
ಸ್ವಾಗತ ಕೋರುವ ಹೊಸದೊಂದು ಲೋಕ.

ಛತ್ರಿ ಹರಡಿದ ಮರ
ಹುಲ್ಲು ಸೆರಗಿನ ಹಾಸಿಗೆ
ಜನರ ಸೇವೆಗೆ ಪುರಸಭೆಯ ಆಸನ
ಕರೆಯುತಿವೆ ಜಗದ ಮನುಜನನು.

ಚಿಮ್ಮುತಿಹ ಕಾರಂಜಿ
ಕಿಚುಗುಡುವ ಗುಬ್ಬಿ
ತೊದಲು ನುಡಿಯ ಕಂದಗಳ ಕೇಕ
ಸುಮಧುರ ಸಮೂಹಗಾನ.

ಹಸಿರಿನ ತೌರುಮನೆಯಿದು
ಕಲ್ಪನೆಯ ಕಸರತ್ತಿಗೆ ಗರಡಿಯಿದು
ಭಾವ ಜೀವಿಗಳ ವಿಹಾರ ತಾಣವಿದು
ಸೋತು ಸೊರಗಿದಾಗೆಲ್ಲ ನೆನೆವುದೆನ್ನ-
ಮನಂ ಉದ್ಯಾನವನಂ.

ಮುಗ್ಧ ಮಗುವಿನ ಮನವು
ಕಗ್ಗಲ್ಲ ಶಿಲೆಯಂತೆ
ಅನುಭವೀ ಶಿಲ್ಪಿ ಕೆತ್ತಿದರೆ
ಮೂರ್ತಿಯಾಗುವುದು ಪೂಜೆಗೆ
ಕಲ್ಲುಕುಟುಕ ಕೈಯಾಡಿಸಿದರೆ
ನೆಲಕೆ ಹಾಸುಗಲ್ಲಾಗುವುದು.

ಋಷಿ ಸಾಕಿದ ಗಿಳಿ "ಸ್ವಾಗತ" ಎಂಬಂತೆ
ಕಟುಕ ಸಾಕಿದ ಗಿಳಿ "ಕೊಲ್ಲು" ಎಂಬಂತೆ
ರೂಪುಗೊಳ್ಳುವುದು ವ್ಯಕ್ತಿತ್ವ ಪರಿಸರದಂತೆ.

ಎಚ್ಚೆತ್ತು ಕಲಿತು ಅರಿತರೆ ಉನ್ನತಿಯಿಹುದು
ಜಾರಿಬಿದ್ದರೆ ಕಿತ್ತು ತಿನ್ನುವುದು ಇಲಿ ಹೆಗ್ಗಣಗಳು
ಮತ್ತೆ ನೀನೆಂದೂ ಮೇಲೇಳಲಾರೆ
ದುಷ್ಟರ ನಡುವೆ ಸುಖ ಕಾಣಲಾರೆ.

ಜ್ಞಾನ ತುಂಬಿದ ಕಲೆಯ ಮೂರ್ತಿಯಾಗಿ
ಕಂಪು ತುಂಬಿದ ಪರಿಮಳದ ಪುಷ್ಪವಾಗಿ
ಕೆಡುಕೆಣಿಸದೆ ಪರರಿಗೆ ಉಪಕಾರಿಯಾಗಿ
ಬಾಳು ನೀ ಎಲ್ಲರೊಳು ಒಂದಾಗಿ.

# ಬಲೆ

ಮಬ್ಬು ಮುಸುಕಿದ ಸಂಜೆ
ಹಾರಾಡುತ್ತಿತ್ತೊಂದು ನೊಣ
ಸಿಕ್ಕಿದ್ದೆಲ್ಲ ಮುತ್ತುತ್ತಾ
ಮತ್ತೇರಿದಾತಿತ್ತು.

ಮೂಲೆಯಲೊಂದು ಜೇಡ
ಸುತ್ತಲೂ ಹೆಣೆದಿತ್ತು ತನ್ನ
ಮಾಯದ ಜಾಲ.

ಬಣ್ಣದ ಕನಸುಗಳನ್ನೆಲ್ಲಾ
ವಿಧಿ ಸೂರೆಗೊಂಡಿತ್ತು,
ಕ್ಷಣದಲ್ಲೆ ಯಮನ ಪಾಶವಾಗಿತ್ತು
ಅಂಗಾಂಗಗಳನು ಛೇದಿಸಿ ಸ್ವಾಹಾ
ಮಾಡುತ್ತಾ ಬಕಾಸುರನ ಹೊಟ್ಟೆಯಲ್ಲಿ
ಜೀರ್ಣವಾಗುತ್ತಿತ್ತು.

ದುಃಖ ರೋಗಗಳೆರಡು
ವಿಧಿಹಾಸಿದ ಬಲೆ
ಹಳ್ಳ ಬಿದ್ದಲ್ಲೇ ಹಳ್ಳ ಕೊರೆಯುವುದು
ದೈವದಾ ಲೀಲೆ.

# ಸಂಕ್ರಾಂತಿ

ಬೆಡಗಿನ ಸಂಕ್ರಾಂತಿ ಬಂತು
ಸಡಗರದಿ ಕುಣಿಯೋಣ ಬಾರ
ಋತು ಚಕ್ರವು ಉರುಳಿ ಬಂತು
ವಸಂತನನು ಕರೆಯೋಣ ಬಾರಾ....

ಭೂ ದೇವಿ ಮೈ ನೆರೆಯುತಿಹಳು
ಹೊಸ ಕಳೆಯನು ಹೊಂದುತಿಹಳು
ಕಿರಿಯ ಕಿಶೋರಿಯರ ಮುಡಿಗೆ
ಹಂಚುತಿಹಳು ಸಂಪಿಗೆ-ಸೇವಂತಿಕೆ.

ರೈತನೆದೆಯ ಬೆವರ ಹನಿಗೆ
ಭೂ ಮಾತೆಯ ಫಸಲ ಕೊಡಿಗೆ
ಕೊಟ್ಟು-ಕೊಳ್ಳಿ, ಹಂಚಿ – ತಿನ್ನಿ
ಒಳ್ಳೆಯ ಮಾತಾಡೋಣ ಬನ್ನಿ.

ಎಳ್ಳು-ಬೆಲ್ಲ, ಕಬ್ಬು – ಕೊಬರಿ
ದೇವಿಯಿತ್ತ ಐಸಿರಿ
ಸ್ನೇಹ, ಪ್ರೀತಿ, ಮಮತೆಯಿಂದಾ
ಕೂಡಿ ಹಾಡೋಣ ಬನ್ನಿರಿ.

ಎಲ್ಲ ಕೂಡಿ ಕುಣಿಯೋಣ
ಕೋಲು ಕುಣಿತ ಹಾಕೋಣ
ದೀನರಲ್ಲಿ ದಯೆಯನಿಟ್ಟು
ದಾನ ಧರ್ಮ ಮಾಡೋಣ.

# ಮಾನವಾತೀತ

ತೊರೆಯಬೇಕು, ಜಾತಿಗಳೆಂಬ ಭೇದವನು
ಮರೆಯಬೇಕು, ಹಲವು ದೇವರುಗಳ ಸ್ಮರಣೆಯನ್ನು
ಬಿಡಬೇಕು, ಒಣ ಪುರಾಣ ಓದುವುದನ್ನು
ತ್ಯಜಿಸಬೇಕು, ಗುರು ಉಪದೇಶವನ್ನು.

ಕಪಟವರಿಯದ ಪ್ರಾಮಾಣಿಕತೆಗೆ
ಮಾನವರೆಲ್ಲಾ ಒಂದೇ ಜಾತಿ
ನಿಷ್ಠೆ ಉಳ್ಳವನಿಗೆ ಒಂದೇ ದೇವರು.

'ಕಾಯಕವೇ ದೇವರು'
ಜ್ಞಾನಿಯಾದವನಿಗೆ ಒಂದೇ ಗ್ರಂಥ
ಅದೇ 'ಅನುಭವ'ದ ಗ್ರಂಥ
ಅನುಸರಿಸುವವನಿಗೆ ಒಂದೇ ಉಪದೇಶ.
'ಸತ್ಯೋಪದೇಶ'.

ಭವವನ್ನು ಹಳಿದವನೇ ಭಕ್ತ
ಇದನ್ನರಿತವನೇ ಮುಕ್ತ.

## ಮರೆಯಬೇಕು

ಮನದ ಕಪ್ಪು ಬೋರ್ಡಿನ ಮೇಲೆ
ಬರೆದ ಬಿಳಿಯ ಅಕ್ಷರಗಳ
ಮರೆವು ಎಂಬ ಡಸ್ಟರ್‌ನಿಂದ
ಪೂರ್ಣವಾಗಿ ಅಳಿಸಬೇಕು.
ಸ್ವಚ್ಛಗೊಳಿಸಿ ಮತ್ತೆ ನಾನು
ಅಚ್ಚ ಹೊಸತು ಚಿತ್ರವನ್ನು
ಮುದ್ದಾಗಿ ಬರೆಯಬೇಕು.

ಮನಕೆ ತೃಪ್ತಿ ಬರುವಂತೆ
ಬದುಕಿಗರ್ಥ ಇರುವಂತೆ
ಇನ್ನಾದರೂ ನವನವೀನ
ಚಿತ್ರವನ್ನು ಬರೆಯಬೇಕು.

ಪೊರೆ ಕಳಚಿದ ಹಾವಿನಂತೆ
ಮೊಟ್ಟೆ ಮುರಿದ ಮರಿಯಂತೆ
ಹೊಸ ರೂಪದಿ ಹೊಸ ನೋಟದಿ
ಹಳೆಯದೆಲ್ಲ ಮರೆಯಬೇಕು
ಹೊಸ ಚಿತ್ರ ಬರೆಯಬೇಕು.

## ಅನ್ಮನಿಗೆ

ಯಾವ ಪಾಪಕೆ ಇಂಥ ಶಿಕ್ಷೆ
ಇಲ್ಲಿ ನನಗಿಲ್ಲ ಯಾರ ರಕ್ಷೆ
ಸಾಕಾಗಿದೆ ಬೇಡಿಲ್ಲಿ ಭಿಕ್ಷೆ
ಸುತ್ತ ಹೆಣೆದಿದೆ ಬಂಧನದ ರಕ್ಷೆ.

ಪರರ ಹಂಗಿನಲಿ ಬಾಳು
ಹಸನಾಗುತ್ತಿಲ್ಲಮ್ಮ
ನಿನ್ನ ಕರುಳಿಗೆ ನನ್ನ ವ್ಯಥೆಯ
ಕೂಗು ಕೇಳದೇನಮ್ಮ.

ಸುತ್ತ ಅಣಕದ ಮಾತುಗಳು
ಅರೆಜೀವವಾಗಿಹೆನು ;
'ತಬ್ಬಲಿ' ಎಂಬ ಹಣೆಪಟ್ಟಿಯ
ಭಾರ ಹೊರೆಲಾರನಮ್ಮ.

ಪ್ರೀತಿಯ ಹಸಿವಾಗಿ ಹಾತೊರೆದು
ಬೇಡುತಿರುವೆ ಎಲ್ಲರನು
ಮಾತೃ ಹೃದಯದ ಹಿತವ
ಇಲ್ಲಾರು ನೀಡಲೊಲ್ಲರು.

ಕೈಕಾಚಿ ನನ್ನ ಕರೆದುಕೋ
ನಿನ್ನ ಮಡಿಲಲ್ಲಿ ಮಲಗಿ
ತೃಪ್ತನಾಗುವ ಬಯಕೆ
ಕಾಡುತಿದೆಯಮ್ಮ.

.... .... ....

ಹಸಿದ ಒಡಲಿದು ತುತ್ತ ಬಯಸುತಿದೆ
ಬಂದು ನೀಡು ತಾಯಿ
ಅತ್ತಿತ್ತು ಕರೆವೆ ಎತ್ತೆತ್ತ ಕಾಣೆ
ಬಿಡುತಿರುವೆ ಬಾಯಿ ಬಾಯಿ.

ಎಲ್ಲ ಸಿದ್ಧಿಗಳು ನಿನ್ನಲಡಗಿಹವು –
ಎಂಬ ಸತ್ಯ ಬಲ್ಲೆ
ನಿನ್ನ ನೆನಪಲ್ಲೇ ಬಾಳ ಸವೆಸುತಿಹೆ
ಅನ್ಯರನ್ನು ಒಲ್ಲೆ.

ಕಂಡವರು ಸೊಲ್ಲು ಸುರಿಸುತ್ತಲಿಹರು
ಅಯ್ಯಯ್ಯೋ ಪಾಪ! ಎಂದು
ಚಿಗುರೊಡೆಯದಂತೆ ಕಮರುತಿದೆ ನೋಡು
ನಿನ್ನೊಡಲ ಒಂದು ಬಿಂದು.

ಎಲ್ಲಿಹೆಯೋ ನೀನು, ಬಯಸುತಿಹೆ ನಾನು
ತಿರುಕನ ಕನಸಿನಂತೆ
ಸತ್ತಿಲ್ಲ ನೀನು, ಕಾಣುವೆನು ನಿತ್ಯ
ನೇತ್ರ ಪಟಲದಲ್ಲಿ ಭಿತ್ತಿಚಿತ್ರದಂತೆ.

ನೀಡಮ್ಮ ತಾಯಿ ಇದ್ದಲ್ಲೆ ನೀನು
ಶಿವ ವರವ ನೀಡುವಂತೆ ;
ಜನರ ಮನಸಿಗೆ ಸ್ಫೂರ್ತಿ ನೀಡಿ
ತಬ್ಬಲಿಯ ಸಲಹ ಹೇಳು.

## ಕವನ

ಏನಾದರೂ ಬರೆಯಬೇಕೆಂದು
ಹಸಿದ ಹಾಳೆಗಳ ಮುಂದೆ ತಂದಾಗ
ಈ ಹಾಳು ಹೆಣ್ಣುಗಳೇ
ನೆನಪಿಗೆ ಬರುತ್ತವಲ್ಲ.
ಏಕೆ ತಲೆ ಕಾರಣವೆ
ಹೆಣ್ಣು ಹೆತ್ತ ತಲೆಯಲ್ಲವೆ ?
ಅದಕ್ಕೆ ಇರಬೇಕು
ಅಥವಾ ಪೆನ್ನು ಕಾರಣವೆ ?
ಕ್ಲಾರಕ್ಕ ಕೊಟ್ಟದ್ದು
ಅವಳೂ ಹೆಣ್ಣೆ ;
ಅದಕ್ಕೆ ಇರಬೇಕು
ಗಂಡುಗಳಲ್ಲೇನು
ವಿಶೇಷ ಕಾಣಲ್ಲ.
ಎಲ್ಲಾ ವಿಶೇಷಗಳನ್ನೆಲ್ಲಾ
ಹೆಣ್ಣುಗಳೆ ನುಂಗಿಬಿಟ್ಟಿವೆಯಲ್ಲಾ
ಹೆಣ್ಣು–ಭೂಮಿ
ಹತ್ತಿರದ್ದು ಮುಟ್ಟಬಹುದು
ಗುರುತ್ವಶಕ್ತಿ ಇದೆ
ಗಂಡು–ಆಕಾಶ
ನೋಡಬಹುದು ಅಷ್ಟೆ
ಅದಕ್ಕೆ ಕವನ ಬರೆಯುವಾಗ
ತಲೆ ಸುತ್ತ ಅವೇ ಸುತ್ತುತ್ತವೆ.
.... .... .... ....

ಚಿಗುರೆಲೆಯು ನಗುತ್ತಿರುವ ಸಮಯ
ಹಣ್ಣೆಲೆಯು ನುಡಿದಿದೆ ರಸಮಯ :
“ನಾಳೆ ಆಗುವೆ ನೀನೂ ನನ್ನಂತೆ.”

ಬೆಳಕೆಲ್ಲ ಬರಿದಾಗಿ
ರಾತ್ರಿ ಬಲೆ ಬೀಸಿದಂತೆ,
ಯೌವನವು ಮುಗಿದು
ಮುಪ್ಪಡರಿದಂತೆ,
ಆಗುವೆ ನೀನೂ ನನ್ನಂತೆ.

ಪರರ ಪತನವ ಕಂಡು
ಹೆಮ್ಮೆಯಲಿ ಹಿಗ್ಗದಿರು
ನಾಳಿನ ನಿನ್ನ ಪಥವನು
ಎಂದಿಗೂ ಮರೆಯದಿರು.

ಅತಿಯಾಗಿ ಹಿಗ್ಗದಿರು
ಹಾಗೆಯೇ ಕುಗ್ಗದಿರು :
ಸಮರಸದ ಬಾಳನ್ನು
ನಡೆಸು ನೀ ಕವಿಯಾಗಿ.

ಆಗುವೆ
ಕಾಲಚಕ್ರವು ಉರುಳಿದಂತೆ,
ನೀನು
ನನ್ನಂತೆ ಕವಿತೆ.

# ವ್ಯರ್ಥ

ನನ್ನಲ್ಲಿ ಹಣ ಯೌವನವಿರುವವರೆಗೆ ಮಾತ್ರ
ಹಿಂದೆ ಸುತ್ತಿ ಹಿತ ನೀಡುತ್ತೀಯ
ರೋಗ ಹಿಡಿದು ಜೇಬು ಖಾಲಿಯಾದಾಗ ಸವೆದ
ಚಪ್ಪಲಿಯಂತೆ ಬೇಸರವಾಗುತ್ತಲ್ಲವೇ ?

ಆಗ –
ಹೊಸ ಯೋಜನೆ ಹಾಕುತ್ತೀಯ
ಹೊಸ ಮಿಕಗಳ ಭೇಟಿಯಾಗುತ್ತೀಯ
ನನ್ನಲ್ಲಿ ನೆನಪೊಂದೇ ಉಳಿಸುತ್ತೀಯ
ಪ್ರೀತಿ - ಪ್ರೇಮಗಳೆಲ್ಲ ನನ್ನಂತವನಿಗೆ ಸಲ್ಲ
ಅಂತಸ್ತು – ಹಣ – ಆರೋಗ್ಯವಿದ್ದವರಿಗೆ
ಸುಖ-ಶಾಂತಿ-ಸಲ್ಲಾಪಗಳೆಲ್ಲ.

ನನ್ನ ಆಸೆಗಳೆಲ್ಲ
ಬೂದಿಯಲಿ ಮಲಗಿದ ನಾಯಿ
ದೇವಲೋಕದ ಕನಸು ಕಂಡಂತೆ
ವ್ಯರ್ಥ.

ಹಳೆ ಬೇರಿಗೆ ಹೊಸ ಚಿಗುರು ಬರುವಂತೆ
ದಿನಕ್ಕೊಂದು ರಂಗು ಪಡೆಯುತ್ತೀಯ
ನೋಡಲಾರದೆ ನಾನು – ಸೇರಿ
ಮಣ್ಣನಲಿ ಮಣ್ಣಾಗುತ್ತೇನೆ.

ವಾದ

ಹೆಣ್ಣೇ ನೀ ಮಾಯೆಯಂತೆ? ನಿಜವೇ!
ನಾನು, 'ಮಾಯೆ'ಯಲ್ಲ ಎನ್ನುತ್ತೇನೆ;
'ಮಹಿಮೆ' ಎಂದು ವಾದಿಸುತ್ತೇನೆ.
ಮಾಯೆ ಕತ್ತಲು, ದಾರಿ ಕಾಣುವುದಿಲ್ಲ
ನೀನು ಬೆಳಕು ತೋರುತ್ತೀಯ.

ಹೆಣ್ಣೇ ನೀ ಹುಣ್ಣಂತೆ? ನಿಜವೆ!
ನಾನು 'ಹುಣ್ಣಲ್ಲ', 'ಹಣ್ಣು' ಎಂದು ವಾದಿಸುತ್ತೇನೆ.
ಹುಣ್ಣು ನೋವು ಕೊಟ್ಟು
ನರಳಿಸಿ ಸಾಯಿಸುತ್ತೆ
ನೀನು ಸಾಯಿಸುವುದಿಲ್ಲ
ಸವಿನೀಡಿ ಚೈತನ್ಯಶಕ್ತಿ ಕೊಡುತ್ತೀಯ.

ಹೆಣ್ಣೇ ನೀ ಬೆಂಕಿಯಂತೆ? ನಿಜವೆ!
ನೀನು ಬೆಂಕಿಯಲ್ಲ, ಹೂವು ಎಂದು ವಾದಿಸುತ್ತೇನೆ.
ಬೆಂಕಿ ಸುಡುತ್ತೆ, ಬೊಬ್ಬೆ ಬರಿಸುತ್ತೆ,
ನೀನು ಸುಡುವುದಿಲ್ಲ, ಹಿತವ ನೀಡುತ್ತೀಯ.

ನಿನ್ನ ತೆಗಳಿಕೆಯ ನಾನು ಒಪ್ಪಲ್ಲ
ಪ್ರೇಮ ಪುತ್ಥಳಿ ನೀನು, ಪಾಶವಲ್ಲ,
ಬರೀ ಹೆಣ್ಣಲ್ಲ ನೀನು, ಲೋಕದ ಕಣ್ಣು;
ಹೊಗಳಿ ತೆಗಳುವರನ್ನೆಲ್ಲಾ, ಹಡೆದವಳು ನೀನು.

# ಸಲಹೆ

ನೆನಪಿರಲಿ–
ಬಸಿರಿನೊಳಗಿನ ಭ್ರೂಣದಂತೆ
ಬಯಕೆ ಉಬ್ಬುತ್ತಲೇ ಇರುತ್ತೆ
ನಿನ್ನ ಬಯಕೆ ಬಸಿರಾಗುವ ಮುನ್ನ
ಪ್ರಸವಕ್ಕೊಂದು ಸೂಕ್ತ ಸ್ಥಳ ಕಂಡುಕೊ.

ನಿನ್ನ ಪ್ರೀತಿ ಉಕ್ಕಿ ಹರಿಯುವ ಮೊದಲು
ಪೋಲಾಗದಂತೆ ಅಣೆಕಟ್ಟು ಕಟ್ಟಿಕೊ
ಜನರ ಬಾಯಲ್ಲಿ ನಿನ್ನ ಹೆಸರು ಹರಿಯುವ ಮೊದಲು
ಕೊರಳಿಗೊಂದು ತಾಳಿ ಕಟ್ಟಿಕೊ.

ದಿಢೀರನೆ ಧುಮುಕಬೇಡ, ತಂಗಿ ;
ಮೊಸಳೆ ಬಾಯಿ ತೆರೆದಿರುತ್ತೆ
ನಿನ್ನ ಅಸ್ತಿತ್ವವನ್ನೇ ನುಂಗಿಬಿಡುತ್ತೆ.

ಗೊತ್ತಿರಬಹುದು ನಿನಗೆ
ಸಣ್ಣದೊಂದು ರಂಧ್ರವಿದ್ದರೆ ಸಾಕು
ದೊಡ್ಡ ಹಡಗನ್ನೇ ಮುಳುಗಿಸಿಬಿಡುತ್ತೆ.

## ಹೇಳುತ್ತೀಯಾ ?

ನಿನ್ನ ಕಂಡಾಗ ಮೈ ಮನವೆಲ್ಲಾ ನಾಚಿ ನೀರಾಗುತ್ತೆ
ಮುನಿಯುವ ಗಿಡದಂತೆ ಮುದುಡುತ್ತೆ
ರಸಿಕತೆ ಮಣ್ಣು ತಿಂದು ಮೂಕವಾಗುತ್ತೆ.

ನಿನ್ನ ಹರೆ ಯೌವನದ
ದುಂಡು ಮೊಲೆಗಳ ಬಿಚ್ಚಿ
ತುಂಬು ತೊಡೆಗಳ ತೋರಿದಾಗ
ಸಂಕೋಚ ಕೊಚ್ಚಿ ಹೋಗಿ
ರಸಿಕತೆಯ ಹೊಸ ಚಿಗುರು ಮೂಡುತ್ತೆ.

ಅಂತರಂಗ ಹಣತೆ ಹಚ್ಚಿ
ಬಾಹ್ಯ ಕತ್ತಲೆ ಕವಿದು
ಪ್ರೇಮಾಲಾಪದ ರಾಗ ಚಿಮ್ಮಿ ಹೊಮ್ಮುತ್ತೆ
ಕ್ಷಣ ಕಳೆದರೆ ಮತ್ತೆ ಅದೇ
ನಾಚಿಕೆ ಅಪ್ಪುತ್ತೆ ಕದ್ದ ಕಳ್ಳನಂತೆ.

ನನಗೆ –
ದಾರಿತಪ್ಪಿ ಓಡಬೇಕೆನಿಸುತ್ತೆ.
ಹೇಳುತ್ತೀಯಾ ?
ನಿನಗೇನನಿಸುತ್ತೆ ?

## ಸಂಜೆಯಾಯಿತು

ಬೆಳಕು ಕರಗಿತು ಚುಕ್ಕಿ ಮೂಡಿತು,
ಇರುಳರಾಣಿಯು ಕರೆಯಿತು.
ಮೆಲ್ಲ ಮೆಲ್ಲಗೆ ಅಡಿಗಳಿಡುತಲೆ
ಮೋಹ ಜಾಲವ ಹರಡಿತು.

ಕರಿಯ ಕೇಶದ ಮುಡಿಯು ಕೆದರುತ
ಮೈ-ಮನಗಳ ಚುಂಬಿಸಿ
ಹೃದಯ ಬೆಸುಗೆಯು ಸನಿಹಗೊಳ್ಳಲು
ಕಂಪು ಹರಡಿತು ತಂಪು ಚೆಲ್ಲಿತು
ಮೊದಲ ರಾತ್ರಿಯ ನೆನಸಿತು.

ತಾರೆ ಮಿನುಗುತ
ನಮ್ಮ ಮಿಲನಕೆ ನಾಚಿವೆ.
ಸುಳಿವ ಗಾಳಿಯು ಸ್ತಬ್ಧವಾಗುತ
ಹಕ್ಕಿ ಗೂಡನು ಸೇರಿತು.
ಕಣ್ಣು ಮುಚ್ಚಲು ಮನವು ಬಿಚ್ಚಲು
ಮಿಲನದತಿ ಮತ್ತೇರಿತು.

ಮೂಡಿತಾಗಲೆ ತುಂಬು ಚಂದಿರ
ಶ್ವೇತ ಛತ್ರಿಯನೆತ್ತುತ
ಬೆಳಕು ಚೆಲ್ಲುತ ನಗೆಯ ಬೀರುತ
ಶುಭವ ಸೂಚನೆ ತೋರುತ.
ಸಫಲವಾಯಿತು, ಶಾಂತಿ ನೆಲೆಸಿತು
ಮಧುರ ನೆನಪೆ ಉಳಿಯಿತು.

## ಕಲಿತಿರುವುದೆಷ್ಟು ?

ಬದುಕು ಕೊನೆಯಿಲ್ಲದ ಸಂಶೋಧನೆ
ಕಲಿತಷ್ಟು ಇನ್ನೂ ಕಲಿಯುವುದುಂಟು.
ನಾನು ಕಲಿತಿರುವುದೆಲ್ಲಾ ಧೂಳ ಕಣದಷ್ಟು.

ಚಿಂತಿಸುವವನಿಗೆ ಬದುಕೊಂದು ನರಕಲೋಕ.
ಚಿಂತನೆ ನಡೆಸಿ ನಡೆಯುವವನಿಗೆ
ಎದುರಲ್ಲೇ ಸೃಷ್ಟಿಯಾಗುವುದು ನಾಕ.

ಪ್ರತಿಯೊಬ್ಬರ ಬುರುಡೆ –
ಕಬ್ಬಿಣದ ಗುಂಡಿನಂತೆ
ಉಪಯೋಗಿಸಿದಷ್ಟೂ ಹೊಳಪಂತೆ ;
ಸುಮ್ಮನಿದ್ದರೆ ತುಕ್ಕು ಹಿಡಿಯುವುದು.
ಕಲಿತಷ್ಟು ಇನ್ನೂ ಕಲಿಯುವುದುಂಟು
ನಾನು ಕಲಿಯುವುದೆಲ್ಲಾ ಧೂಳಕಣದಷ್ಟು.

## ಬರಲಿಲ್ಲ

ಐದು ಗಂಟೆಗೆ ಎದ್ದು
ಮೈಕಿನ ಮುಂದೆ ನಮಾಜು
ಕೂಗಿದರೂ ಅಲ್ಲಾ ಬರಲಿಲ್ಲ
ಇನ್ನೂ ಬಂದಿಲ್ಲ.

ಮಾಗಿಯ ಮುಂಜಾನೆ
ಕೊರೆವ ಚಳಿಯಲ್ಲಿ
ನಡುಗುತ್ತಾ ಅಭಿಷೇಕ ಮಾಡಿದರೂ
ಈಶ್ವರ ಒಲಿಯಲಿಲ್ಲ
ಇನ್ನೂ ಬರಲಿಲ್ಲ.

ದಿನಕೆರಡು ಬಾರಿ
ಚರ್ಚಿನಲಿ ಪ್ರಾರ್ಥನೆ ಮಾಡಿದರೂ
ಏಸು ಬರಲಿಲ್ಲ
ಏನೂ ಹೇಳಲಿಲ್ಲ.

ಯಾಕೆ ಮೂಕರಾದಿರೆಲ್ಲಾ
ನೋವಾದಾಗ ಹರಕೆ
ಹಬ್ಬ ಹರಿದಿನಗಳಲಿ ಕಾಣಿಕೆ
ಇನ್ನೆಷ್ಟು ಬೇಕು ?

ನಮ್ಮ ಗುಡಿಸಲುಗಳು ಸೋರುತ್ತಿದ್ದರೂ
ನಿಮಗೆ ಮಸೀದಿ ಕಟ್ಟಿಸಿಲ್ಲವೇ ?
ನಮ್ಮ ಮೈ ಮುಚ್ಚಲು ಬಟ್ಟೆ ಇಲ್ಲದಿದ್ದರೂ
ನಿಮಗೆ ಚಿನ್ನದ ಕಿರೀಟ ಮಾಡಿಸಲಿಲ್ಲವೇ ?

ಊರೂರಲ್ಲು ಚರ್ಚುಗಳ ನಿರ್ಮಿಸಿಲ್ಲವೆ ?
ನಿಮ್ಮನ್ನು ಯಾರಾದರೂ ಕದ್ದಾರೆಂದು
ಪೂಜಾರಿ ಕಾವಲುಗಾರರನ್ನು ನೇಮಿಸಿಲ್ಲವೇ ?

ಹೊರಗೆ ನಾವೇನೇ ಮಾಡಿಕೊಂಡರು
ನಿಮ್ಮ ವಿಷಯದಲ್ಲಿ ಕಟ್ಟುನಿಟ್ಟು
ಹಬ್ಬ – ತೇರು - ಪಲ್ಲಕ್ಕಿಗಳಲ್ಲಿ ಮೆರೆಸಿಲ್ಲವೇ ?
ಹುಟ್ಟಿದ್ದಕ್ಕೂ ಸತ್ತಿದ್ದಕ್ಕೂ ನಿಮ್ಮ ಹೆಸರೇ –

ನಿಮಗಾಗಿ ಅಲೆವ ನಮ್ಮ ಶ್ರಮವೆಲ್ಲ ವ್ಯರ್ಥ
ಯುಗ ಯುಗಗಳಿಂದಲೂ ನಿಮ್ಮ ಕತೆಗಳ
ಅಂತೆ–ಕಂತೆಗಳು.
ನಮ್ಮ ಶ್ರಮವೆಂದಾದರೂ ಫಲಿಸೀತೇ ?
ಕಲ್ಲಾಗಿ ನಿಂತಿರುವ ನಿಮ್ಮಗಳ
ಕದಲಿಸುವ ಶಕ್ತಿ ಬಂದೀತೇ ?

## ಅಪ್ಪಿಕೋ

ಅಪ್ಪಿಕೋ ನನ್ನನ್ನಲ್ಲ
ನಿನ್ನೆದುರಿರುವ ಮರವನ್ನು
ನಾನು ಮೋಸ ಮಾಡಿದರೂ
ಮರ ಮೋಸ ಮಾಡಲಾರದು.

ಅಚಲವಾಗಿ ನಿಂತು
ಅಭಯ ಹಸ್ತ ನೀಡುವುದು
ನೀನಿತ್ತ ಹನಿಹನಿಯನುಂಡು
ಹಸುರಿತ್ತು, ಹೂಫಲವಿತ್ತು
ಸದಾ ನಿನಗೆ ಋಣಿಯಾಗಿರುವುದು.

ಇಂದೇ ನೆಡು ಗಿಡವೊಂದನ್ನು
ಎಲೆ ಎಲೆಯು ನಿನ್ನ ಹೆಸರ ಹೇಳುವುದು
ಪ್ರೀತಿಯಿಂದೊಮ್ಮೆ ಮೈದಡವಿ ಪೋಷಿಸು
ಅದರ ಪ್ರತಿಫಲ ಕಣ್ಣೆದುರು ನಿಲ್ಲುವುದು.
ಮಳೆಯನ್ನು ಕರೆಯುವುದು
ಭೂ ಸವೆತ ತಡೆಯುವುದು.

ಕೂಗುತಿದೆ ಎಲ್ಲೆಲ್ಲೂ "ಅಪ್ಪಿಕೋ" ಎಂದು,
ದುಷ್ಟ ಕೈಗಳಿಂದ ತನ್ನ ರಕ್ಷಿಸು ಎಂದು:
ರಾಷ್ಟ್ರದೇಳಿಗೆಗಾಗಿ ಬೆಳಸೊಂದು ಮರವನ್ನು
ಈ ನೆಲದ ಋಣ ತೀರಿಸಲು ನೆಡು ಒಂದು ಗಿಡವನ್ನು.

## ಕ್ಷಮಿಸುವೆಯಾ ತಂದೆ

ಕ್ಷಮಿಸುವೆಯಾ ಒಡೆಯ
ನನ್ನನ್ನೂ ನನ್ನ ಲೇಖನಿಯನ್ನೂ
ಕೆಲವು ಉನ್ಮಾದ ಕ್ಷಣಗಳಲಿ
ಅಶ್ಲೀಲ ಚಿತ್ರ ತಲೆಹೊಕ್ಕು
ನನ್ನ ಲೇಖನಿ ಭಾವನೆಗಳನ್ನು
ಬೆತ್ತಲಾಗಿಯೇ ರಚಿಸಿದೆ.

ನಿನ್ನ ಶೋಧನೆಗಿಳಿದು, ಕುರುಹು ಸಿಗದಿದ್ದಾಗ
'ಎಟುಕದಾ ದ್ರಾಕ್ಷಿ ಹುಳಿ ಎಂದ' ನರಿ ನ್ಯಾಯವ ನಂಬಿ
ಬದುಕು ಶೂನ್ಯವೆಂದು ಬರೆದೆ.

ನಿನ್ನ ಮಹಿಮೆಯನು ಅರ್ಥಮಾಡುವ ಜ್ಞಾನಿ ಹುಟ್ಟಿಲ್ಲ
ಇರುವಲ್ಲೇ ಎಲ್ಲವನೂ ನೋಡುವ
ಮಾಡುವ ಜಾದುಗಾರ ನೀನು.
ನನ್ನ ಮೈ ರೋಮ ರೋಮದ
ಭಾವನೆಯು ನಿನಗೆ ಗೊತ್ತುಂಟು.
ಕೇಳಲು, ಹೇಳಲು, ಬರೆಯಲು,
ನಾನು ನೆಪ ಮಾತ್ರ – ಅಲ್ಪ.
ಕ್ಷಮಿಸುವೆಯಾ ತಂದೆ
ನನ್ನನ್ನೂ ನನ್ನ ಲೇಖನಿಯನ್ನೂ
ಹೇಗಾದರೂ ಸರಿ ಕೊನೆವರೆಗೂ ನನ್ನ ಕೈಹಿಡಿದು ನಡೆಸು.
ಈಶ ವಾದದ ಅರಿವಿನಂಕುರಾರ್ಪಣೆಯು
ಶಂಕರಾರ್ಪಣೆಯೇ.
ಶಕ್ತಿ ಸಮೇತ ಸರ್ವಶಕ್ತನೆ
ಕೈ ಹಿಡಿದು ನಡೆಸು ಶಿವಾಮೃತದೆಡೆಗೆ.

## ಕಾವ್ಯಕ್ಕೆ

ನಿನ್ನ ಸೊಗಸಿನ ಸವಿಸುಧೆಯ ಸವಿಸವಿದು
ನನ್ನ ಮನದಾಳದಲ್ಲೂ ಮೂಡುವುದು ಮುತ್ತುನುಡಿ.
ಚಿತ್ರಿಸಲೆತ್ನಿಸುವೆ ನಿನಗೆ ಸಾಟಿಯಾಗಿ
ಅದ್ದೂರಿ ಭಕ್ಷದಲಿ ನಂಚಿಕೆಯ ಪಲ್ಯದಂತೆ.

ನಿನ್ನೆದೆಯೊಳಗಡಗಿರುವ ಭಾವನೆಯ ಮುತ್ತುಗಳ
ಆಯ್ದು ಬಚ್ಚಿಡುವೆ ಅಮೂಲ್ಯನಿಧಿಯಂತೆ
ಕಡೆಕಡೆದು ತೆಗೆದಿಟ್ಟ ಬೆಣ್ಣೆಯನು
ಕಾಯಿಸುವೆ ಚಿಂತನೆಯ ಕಿರುಗಾವಿನಿಂದ.

ನಿನ್ನ ಹೊಳೆಯಲ್ಲಿ ನಾನು ಹನಿಯಾಗಿ ಬೆರೆವಾಸೆ
ನಿನ್ನ ಜೊತೆಗೂಡಿ ಮುಕ್ತಿ ಸಾಗರ ಸೇರುವಾಸೆ
ಹೂವಿನೊಂದಿಗೆ ನಾರು ನಾಕವನು ಕಂಡಂತೆ
ನಿನ್ನ ಕೃತಿ ಮಧ್ಯದಲಿ ನನದೊಂದು ಕವಿತೆ.

ಏಕಲವ್ಯನಂತೆ ನಾನಿರುವೆ ಒಂಟಿ
ಕಾವ್ಯಕೃತಿಗಳೆ ನನಗೆ ಗುರುದ್ರೋಣನಂತೆ
ಸತತ ಯತ್ನಿಸುವೆ ನಿನ್ನನರಿಯಲು ನಾನು
ಸಫಲವಾಗುವುದೇ ಕವಿಯ ಕಷ್ಟದ ಪಾಡು.

## ಕವಿ–ಕವಿತೆ

ಕಲ್ಪನಾಲೋಕದಲ್ಲಿ ವಿಹರಿಸುತ್ತಾ
ಕಾಣದ್ದಕ್ಕೆ ಕೈ ಚಾಚುತ್ತಾ
ಶಿಪ್ಪಿಯ ಕೆದಕುವ ಕೋಳಿತೆರದಲಿ
ಮನಗಳ ತಡಕುವ
ಭಾವಲೋಕದ ಜೀವಿ ಈತ.

ಹೃದಯ ಮಂಥನದಲ್ಲಿ ಪುಟಿದ ಭಾವಕ್ಕೆ
ಶಬ್ದ ಸಂಕೋಲೆ ಬಿಗಿಯುತ್ತಾನೆ
ಘನತರ ಸೌಂದರ್ಯ ಸೃಷ್ಟಿಸಿ
ಮನಕೆ ಹರುಷದ ಸುಧೆ ಸುರಿಸುತ್ತಾನೆ.

ಬಾನಿನ ನೀಲಿಯ ಮುತ್ತಲಿನಲ್ಲಿ ಮೋಡ ತೇಲಲು
ಸುಪ್ರಭಾತದಲ್ಲಿ ಹಕ್ಕಿ ಉಲಿಯಲು
ಹರಯದ ಲಲನೆಯರ ವೈಯ್ಯಾರ ಕಾಣಲು
ಸ್ಫೂರ್ತಿವೆತ್ತ ಕವಿ ಕೊರೆಯುವನಾಗಲೇ ಕವಿತೆ.

ನುಡಿಯ ಬೊಂಬೆಗೆ ಉಡಿಗೆ ತೊಡಿಸಿ
ಬೆಡಗು ಸೂಸುತ ಬೆರಗು ಚಿಮ್ಮಲು
ಮಿಡಿಯದಿರುವುದೇ ಹರುಷ.

ವಿರಹದೆದೆಗೆ ಉಸಿರು ಬಂದು
ಭಗ್ನ ಹೃದಯದಿ ಆಸೆ ಕೊನರಿ
ಕವಿತೆಯಿಂದಲೇ ಕಣ್ಣು ತೆರೆವುದು.

ಕವಿಯ ಒಳಗಣ್ಣಿಗೆ ದೈವದ
ಅರಿವು ಅಂಟಲು ಅದ್ಭುತ
ಅಂತರಾಳದ ಕವನ ಬರೆಯುವ ಕವಿ ಶಾಶ್ವತ.

# ಪ್ರೇಮ

ಎವರೆಸ್ಟಿನೆತ್ತರದಿ ಅರಳಿ ನಗುತಿಹ ಕುಸುಮ
ರೆಕ್ಕೆಯಿಲ್ಲದ ದುಂಬಿ ಹಾರಿ ಸೇರುವುದೆ ನಿನ್ನ
ಶಶಿಯು ತುಂಬಿದ ಬಾನ ತೆರದಲಿ
ಪ್ರೇಮ ಹರಡಲಿ ಬಾಳಿನಲ್ಲಿ.

ಮಧುರತೆಯ ಸ್ವಾಮ್ಯ ಪಡೆದ
ಕೋಗಿಲೆಯ ಇಂಚರಕ್ಕೆ
ನನ್ನ ಧ್ವನಿ ಸಾಟಿಯಿಹದೆ ?
ಮಡುಗಟ್ಟಿ ನಿಂತ ನೀರಿಗೆ
ಕಡಲ ಸೇರುವ ತವಕವೇಕೆ ?
ಪ್ರೇಮವೇನನು ಬಯಸದು
ಸಿಹಿಯ ತುಂಬಿದ ಜೇನದು
ಅದು ಪರರ ಸುಖಕಾಗಿರುವುದು.

ಹೂ – ದುಂಬಿಗಳಂತರ,
ಕವಿ – ಕವನಗಳಿಂಚರ
ಸಾರಿ ಹೇಳಲಿ ಪ್ರೇಮದ ಮಹತ್ವ.
"ನಿಜವಾದ ಪ್ರೇಮ
ಶಾಂತಿ – ಸೌಮ್ಯಧಾಮ"

## ಸೆಳೆತ

ನಾನೊಂದು ಕನಸಿನಾಸೆಯ ಹೊತ್ತು
ಬಿರಿಯುತ್ತಿದ್ದ ಹೂವು.

ಚಂದಿರನಲ್ಲಿ ನೈದಿಲೆಯಲ್ಲಿ
ಆದರೂ ಪ್ರೇಮದ ಸೆಳೆತ.

ಮಂಜು ಹನಿಗಳ ತಿಂದು
ಬಯಕೆ ಪಕಳೆಗಳ ಬಿಚ್ಚಿ
ಸುಗಂಧ ಸಿಂಚಿಸುವ
ಮುನ್ನ ಪರರ ಪಾಲಾಗಬೇಕೆ ?

ಸಾವಿರ ಸಾವಿರ ಗಾವುದ ದೂರ
ಇಹುದಂತೆ ಪ್ರೇಮದ ತೀರ.

ಹೂವು ದುಂಬಿಗೇ ಮೀಸಲೆಂಬುದು
ಸುಳ್ಳಾಗಿ ಹಂದಿಯೂ ಮೂಸಿದರೆ ?
ಅರಳಿದ ಹೂವೆಲ್ಲ ದೇವರಿಗೆ ಸೇರುವುದು ಸುಳ್ಳು
ಹೂವಿನ ಬಾಳು ಧನ್ಯವೆಂಬುದು ಜೊಳ್ಳು.

ನಾವೆಯು ಕಣ್ಣಿಗೆ ಕಾಣದು
ಪ್ರೇಮದ ತೀರದ ದೂರ
ತೀರವ ಸೇರುವ ಗುರಿಯೇ
ಬದುಕಿನ ಜೀವದ ಸಾರ.

## ಬಯಕೆ

ಅದೇ ರಾತ್ರಿ, ಅದೇ ಹಗಲು. ನಡುವೆ
ದಿನಗಳೆಷ್ಟೋ ಉರುಳಿವೆ.
ಅದೇ ನೆನಪು, ಅದೇ ನೋವು ಮತ್ತೆ ಮತ್ತೆ ಕಾಡಿದೆ.

ನಗುವ ಹೂವಿನಲ್ಲಿ ನಿನ್ನ
ರೂಪಕಾಗಿ ಹುಡುಕಿದೆ
ತಲೆಯ ತುಂಬಾ ಮುಸಕನೆಳೆದು
ಕನಸುಗಳಲಿ ತಡಕಿದೆ.

ಪ್ರೀತಿ ಮುತ್ತು ಎದೆಗೆ ಒತ್ತಿ
ಉಳಿಸಿದೆ ಚಿರಮುದ್ರೆ
ಅದೇ ಸವಿಯು ನೆನಪಾಗಿದೆ ಇನ್ನೆಲ್ಲಿದೆ ನಿದ್ರೆ.

ಬೆಳದಿಂಗಳು ಹಾಲ್‌ಚೆಲ್ಲುತ
ವಿರಹದ ಕಿಚ್ಚನು ಹಚ್ಚಿದೆ
ತಂಗಾಳಿಯು ಸುಳಿ ಸುಳಿಯುತ
ನನ್ನ ಎದೆಯ ಚುಚ್ಚಿದೆ.

ಬಯಕೆ ಬಳ್ಳಿ ಕವಲೊಡೆದು
ಬೇಲಿ ಮುಳ್ಳ ತಬ್ಬಿದೆ
ಮಧುರ ಸ್ಪರ್ಶದೊರೆಯದಿರಲು
ಮಿಲಿಮಿಲಿ ಒದ್ದಾಡಿದೆ.

ಬರುವುದೇನು ? ಮತ್ತೆ ತಿರುಗಿ
ನನ್ನ ಬಾಳ ಪಥದಲಿ
ಉಳಿವುದೇನು ? ಹಾಗೆ ಹಾಗೆ
ಇತಿಹಾಸದ ಪುಟದಲಿ.

# ಸತ್ತವರು

ಎದೆಯುಣಿಸಿ ಮುತ್ತಿಟ್ಟು ಸಾಕಿದವರು
ಎತ್ತಿ ಮುದ್ದಾಡಿ, ನೆತ್ತಿಗೆ ಎಣ್ಣೆ ಒತ್ತಿದವರು
ಎಲ್ಲರಿಗೂ "ತನ್ನ ಮಗುವೆಂದು" ತೋರಿಸಿ ಬೆಳೆಸಿದವರು
ನಮ್ಮ ಸೇವೆಗೆ ಅವರು ಕಾಯಲಿಲ್ಲ.

ನಮ್ಮ ನೆರಳಿಗೆ ಗೂಡು ಕಟ್ಟಿದವರು
ನಮಗಾಗಿ ಬೆವರಿಳಿಸಿ ದುಡಿದವರು
ಕಣ್ಣಲ್ಲಿ ನಮ್ಮನ್ನು ಕಾಯ್ದುಕೊಂಡವರು
ತಮಗಾಗಿ ಏನನ್ನೂ ಬಯಸಲಿಲ್ಲ.

ಜ್ಞಾನ ಮಾರ್ಗಕ್ಕೆ ಗ್ರಂಥ ಬರೆದವರು
ಕರ್ಮ ಮಾರ್ಗಕ್ಕೆ ಸ್ಮೃತಿಗಳ ಶೃತಿ ಮಾಡಿದವರು
ನಮಗಾಗಿ ಮುಗಿಲೆತ್ತರಕ್ಕೆ ಹಾರಿ ಇಳಿದವರು
ತಮಗಾಗಿ ಏನನ್ನೂ ಬಯಸಲಿಲ್ಲ.

ಬದುಕಿನ ಅರ್ಥವನ್ನು ತಿಳಿಸಿದವರು
ಬೆಳೆವ ಪೀಳಿಗೆಗೆ ದುಡಿದವರು
ರಕ್ತ ಹರಿಸಿದವರು, ಹಿಂಸೆ ಸಹಿಸಿದವರು
ತಮಗಾಗಿ ಏನನ್ನೂ ಬಯಸಲಿಲ್ಲ.

ನಮ್ಮ ಬದುಕಿಗೆ ದಾರಿ ದೀಪವಾದವರು
ಸಕಲ ಸಾರಗಳ ಸಿದ್ಧಿಯನು ತಂದು ಮುಂದಿಟ್ಟು
ತಮಗಾಗಿ ಏನನ್ನೂ ಬಯಸದೇ ಅಮರರಾದರು.

## ಬಾ ಎಂಭತ್ತೈದೇ

ಹರುಷದ ಉಸಿರನು ಹೊತ್ತ ಹೊಸವರುಷ
ಸ್ವಾಗತವು ನಿನಗೆ, ಬಾ ಎಂಭತ್ತೈದೇ.
ಉರುಳುವ ಕಾಲ ರಥದಲ್ಲಿ
ಹೊಸ ಪಥಕೆಮ್ಮನು ಒಯ್ಯಲು ಬಾ;

ಹಸಿರು ತುಂಬಿದ ವನರಾಶಿಯಲ್ಲಿ
ಸುಳಿಯುವ ಮೆಲ್ಲುಲಿಯಂತಾಗಿ
ಹಣ್ಣೆಲೆ ಮರೆಯಾಗಿ ಚಿಗುರೆಲೆ ಸಾರುವ
ನವ ವಸಂತದ ಮುಗುಳ್ನಗೆಯಾಗಿ
ಬಾಳಿಗೆ ಚೇತನ ಸಿಂಚಿಸಲು ಬಾ.

ದ್ವೇಷದ ಕಂದಕಗಳ ಮುಚ್ಚಿ
ಸ್ವಾರ್ಥದ ಹಂದರಗಳ ಕೊಚ್ಚಿ
ಎಲ್ಲರ ಹೃದಯಗಳಲ್ಲಿ ಜ್ಯೋತಿಯ ಹಚ್ಚಿ
ಸಮತೆಯ ಬಾಳನು ಬೆಳಗಲು ಬಾ;

ನಿಶೆಯ ನೆರಳನು ಕಳೆವ ಉಷೆಯಾಗಿ
ಮಂಜು ಹನಿ ಹನಿಯಲ್ಲಿ ಬೆಳಕು ರಂಗು ರಂಗಾಗಿ
ತಿಂಗಳ ತಿಳಿ ಬೆಳಕು ಚೆಲ್ಲುತ್ತಾ
ಚೆಲುವು ಗೆಲುವು ನೀನೇ ಆಗಿ ಬಾ.

# ಐಕ್ಯಗಾನ

ವಿವಿಧತೆಯಲಿ ಐಕ್ಯತೆಯನು ಸಾರಿರೆಲ್ಲರೂ
ವಿವಿಧ ವೇಷ, ಭಾಷೆಗಳು ಬೇರೆ ಬೇರೆಯಾದರೂ
ಮನುಜ ಕುಲಜರೆಲ್ಲ ನಾವು ಒಂದೇ ಎನ್ನಿರೊ.

ಎಳೆ ಎಳೆಗಳ ನೂಲು ಸೇರಿ ವಸ್ತ್ರವಾಗಿದೆ
ಎಲ್ಲೆ ಎಲ್ಲೆ ಬೇರೆಯಾದರೊಂದೆ ನೆಲವಿದೆ
ಕೊಂಬೆ ಕೊಂಬೆ ಬೇರೆಯಾದರೊಂದೆ ಫಲವಿದೆ
ವಿವಿಧ ಅಂಗ ಇದ್ದರೇನು ಹೃದಯ ಒಂದಿದೆ.

ಭಾರತಾಂಬೆ ಕೊರಳಿನಲ್ಲಿ ಕೋಟಿ ಕೋಟಿ ಹೂವಿದೆ
ಏಕಭಾವದಿಂದ ಕೂಡಿ ಒಂದೆ ಮಾಲೆಯಾಗಿದೆ.
ನಮ್ಮ ತಾಯ ಚೆಲುವ ಮೊಗದಲೆರಡು ಕಣ್ಣವೆ
ಕರುಣೆ ತುಂಬಿ ಕಾಣ್ವ ನೋಟ ಒಂದೆಯಾಗಿದೆ.

ಒಗ್ಗಟ್ಟಿನ ಒಮ್ಮನಸಿನ ಒಕ್ಕೊರಲೊಳು ಕೂಗೋಣ
ಒಂದೇ ತಾಯ ಮಕ್ಕಳೆಂಬ ಐಕ್ಯಗಾನ ಹಾಡೋಣ,
ಮನದ ಒಡಕು-ಬಿರುಕುಗಳ ಬೆಸೆದು ಒಂದೆ ಮಾಡೋಣ
ಹೆತ್ತಮ್ಮಗೆ ಹರುಷ ತಂದು ಮುಕ್ತರಾಗಿ ಬಾಳೋಣ.

## ಕಾಡುವ ಭಾವಗಳಿಗೆ

ಕನಸುಗಳೇ, ಬಿಸಿ ಬಯಕೆಗಳ
ಕೆದಕಿ ಕಾಡಬೇಡಿ.
ಕೋಗಿಲೆಯೇ, ಕೂಗಿ ನನ್ನೆದೆಯ
ನಿಶ್ಶಬ್ದವ ಕೆದಕಬೇಡ.
ಹೂವೇ, ತಲೆದೂಗಿ ತೊನೆಯುತ್ತಾ
ನನ್ನ ಕಲ್ಪನೆಗೆ ಪುಟ ಕೊಡಬೇಡ.

ದುಂಬಿಗಳೇ, ನನ್ನೆದುರೇ ಹಾರಾಡಿ
ನಿಷ್ಪ್ರಯೋಜಕನೆನಿಸಬೇಡಿ.
ಹುಚ್ಚಾಸೆಗಳನ್ನೆಲ್ಲಾ ಬಿಚ್ಚಿ
ಕಂಡವರೆದುರು 'ಕಪಿ' ಎನಿಸುವಂತೆ
ಮಾಡಬೇಡಿ.

ನಿರ್ಲಿಪ್ತ, ನಿರ್ಭಾವ ನಾನಾಗಬೇಕು
ನನ್ನ ಪಾಡಿಗೆ ನನ್ನ ಬಿಟ್ಟುಬಿಡಿ.
ಸೊಡರಂತೆ ಉರಿದೆನ್ನ ಮನವ ದಹಿಸಬೇಡಿ
ಎಂದೆಂದೂ ದಯವಿಟ್ಟು ನನ್ನ ಕಾಡಬೇಡಿ.

ಕಣ್ಣುಗಳೇ, ನೀವು ಕುರುಡಾಗಿ
ಕಿವಿಗಳೇ, ನೀವು ಕಿವುಡಾಗಿ
ಸ್ಪರ್ಶವೇ, ನೀನು ಜಡವಾಗು
ಕಾಡುವ ಈ ಕಾಟ ತಪ್ಪಿಸಲು
ದೇವರೇ ನೀನು ನೆರವಾಗು.

# ಆಸ್ಪತ್ರೆಯಲ್ಲಿ ಬೆಳಗಾದ ಬಗೆ

ಇರುಳೆಲ್ಲಾ ಹೆರಿಗೆ ಯಾತನೆ ಕುಡಿದು
ಮುಲು ಮುಲುಕಿ ಸೋತು ಸುಸ್ತಾಗಿ
ಕೀರಲು ಧ್ವನಿಯಲಿ ಕಿರುಚುವ ಕಂದ
ಹೊರಬಂದು ದಾದಿಯ ಕೈ ಸೇರಿದಾಗ
ಆಸ್ಪತ್ರೆಯಲಿ ಬೆಳಗಾಯಿತು.

ಕ್ಲೋರೋಫಾರ್ಮ ಮತ್ತಿನಲಿ
ಮಲಗಿದ್ದ ಮುದುಕನಿಗೆ
ಹೊಸ ಜೀವ ಸೇರಿದಂತಾಗಿ
ಸುತ್ತೆಲ್ಲಾ ಕಣ್ಣು ಪಿಳಕಿಸಿದಾಗ
ಆಸ್ಪತ್ರೆಯಲಿ ಬೆಳಗಾಯಿತು.

ಉಬ್ಬಸದ ಉಸಿರೊಡೆದೊಡೆದು
ಉಸಿರು ನಿಂತಿಹ ಶವದ
ನಾಡಿ ಮಿಡಿತವ ನೋಡಿ
ನರ್ಸ್ ಸಂತಾಪ ಸೂಚಿಸಿದಾಗ
ಆಸ್ಪತ್ರೆಯಲಿ ಬೆಳಗಾಯಿತು.

"ಯಾಕೆ ಬೆಳಗಾಯಿತೋ" ಎಂದನೊಬ್ಬ
"ಇನ್ನೆಷ್ಟು ದಿನ ಈ ಯಾತನೆ" ಎನ್ನುವನೊಬ್ಬ
"ಸಧ್ಯ, ದಿನವೊಂದ ಕಳೆದೆ" ಎಂದೊಬ್ಬ
ತಮ್ಮ ತಮ್ಮಲ್ಲಿ ಮಾತಾಡಿಕೊಂಡಾಗ
ಆಸ್ಪತ್ರೆಯಲಿ ಬೆಳಗಾಯಿತು.

# ತಾಳು ಮನವೆ

ಇರಲಿ ನಿನ್ನಯ ಬಯಕೆ
ನಿನ್ನೊಳಗೆ ಮನವೇ
ನಿನ್ನಂತೆ ಇರುವರೆಷ್ಟೋ ವಿರಹಿಗಳು
ಕೊರಗದಿರು ಮನವೇ.

ಪ್ರೇಮವೆಂಬುದು ಕಡಲೆಪುರಿಯಲ್ಲ
ಸ್ವಲ್ಪ ಸುಮ್ಮನಿರು ಮನವೆ
ಕ್ಷಣಿಕ ಸುಖದ ಘಳಿಗೆಗಳಿಗಾಗಿ
ಹುಚ್ಚಾಗದಿರು ಮನವೇ.

ಉರಿವ ಗಾಯಕೆ ಉಪ್ಪನೆರಚಿದಂತೆ
ನೆನಪಿನಲ್ಲೇಕೆ ಬೇಯುವೆ ಮನವೇ.
ಭ್ರಷ್ಟಲೋಕದ ಕಟ್ಟುಪಾಡುಗಳು
ಕಿತ್ತೊಗೆವ ಜಟ್ಟಿಯಾಗುವ ತನಕ
ತಾಳು ತಾಳೆಲೆ ಮನವೇ.

ಕಾಲ ಕೂಡಿ ಬರುವವರೆಗೂ
ಕಾತರಿಸದೆ ಕಾಯುತಿರು
ಮನವೇ, ನನ್ನ ಮುದ್ದು ಮನವೇ.

## ನಿಟ್ಟುಸಿರ ರಾತ್ರಿಗಳು

ನನ್ನ ಅಮಾವಾಸ್ಯೆ ರಾತ್ರಿಯಲಿ
ಚುಕ್ಕಿಗಳ ಬೆಳಕೂ ಇಲ್ಲ
ನನ್ನ ಬಾಳಿಗೆ ಇನ್ನು
ಪೌರ್ಣಮಿ ಬರುವುದಿಲ್ಲ.

ಗೂಗೆಗಳು ಕೂಗುತ ಅಲೆವ
ರಾತ್ರಿಗಳು ನನ್ನವು ;
ಜೋಡಿಗಳು ನಗುತ ನಲಿವ
ಬೆಳದಿಂಗಳಿರುಳು
ಇನ್ನು ನನ್ನದಲ್ಲ.

ಪ್ರೇತಗಳು ಕೇಕೆಯಲಿ ಕುಣಿವ
ರಾತ್ರಿಗಳು ನನ್ನವು ;
ಪ್ರೇಮಿಗಳ ಮೆಚ್ಚಿನಿರುಳು
ಇನ್ನು ನನ್ನದಲ್ಲ.

ಉರಿವ ನಿಟ್ಟುಸಿರೊಡೆವ
ರಾತ್ರಿಗಳು ನನ್ನವು ;
ಬಿಸಿಯುಸಿರಿನಪ್ಪುಗೆಯ
ಇರುಳು ನನಗಿಲ್ಲ
ಸವಿ ಮಧುರ ರಾತ್ರಿಗಳು
ನನ್ನ ಪಾಲಿಗೆ ಇನ್ನಿಲ್ಲ.

# ಬುರ್ಖಾ ಮತ್ತು ತಲ್ಲಾಕ್

'ಬುರ್ಖಾ'ದ ಒಳಗೊಂದು
ಭಾವನೆಯ ಗೊಂಬೆ
ಕರುಕಾಗಿ ಕೂಗುತಿದೆ
ಶತಶತಮಾನದಿಂದ.

ಎಂದು ತನ್ನಿನಿಯ 'ತಲ್ಲಾಕ್' ಹೇಳಿ
ಹೊರದೂಡುವನೋ ಎಂದು
ಮರೆಯಲ್ಲೆ ಥರಗುಡುತಿದೆ
ಭಯ ಭೀತಿಯಿಂದ.

ಮಾನವೀಯತೆಯ ಮೌಲ್ಯ ಮುರಿದು
ಟೊಳ್ಳು ಧರ್ಮವನು ಮುಂದುಮಾಡಿ
ಸ್ವಾತಂತ್ರ್ಯ ಕಬಳಿಸುವ ಕಪಟತನ
ಇನ್ನೂ ಎಷ್ಟು ದಿನ ?

ಜನರ ತೋರಿಕೆಗೆ 'ಬುರ್ಖಾ' ಮುಚ್ಚಬಹುದು
ಹರಿದೋಡುವ ಮನದ ಇಚ್ಛೆಯನು
ಮುಚ್ಚಲಳವೆ ?

ಸತಿಯು ಬೇಡವಾದಾಗ 'ತಲ್ಲಾಕ್' ಹೇಳಬಹುದು ;
ಆವಳ ವಿರಹದುಸಿರಿನ ಶಾಪವನು
ತಡೆಯಲಳವೆ ?

## ಪ್ರಶ್ನೆ

ಸಾಗುತಿದೆ ಕ್ಷಣ ಕ್ಷಣವೂ
ಸ್ಮಶಾನದ ಕಡೆಗೆ ಇಟ್ಟ ಹೆಜ್ಜೆಯಂತೆ.

ಬದುಕಿನ ತೈಲ ಹೀರಿ ಹೀರಿ
ಹೋರಾಟದಲೇ ಉರಿಯುತ್ತಿದೆ ಇನ್ನು
ಮಂದ ಬೆಳಕಿನಂತೆ
ತೊಯ್ದಾಡುತಿದೆ ಜೀವ.
ನನ್ನ ಪಯಣದಲಿ ಒಂದಾಗಿ ಬಂದವರಿಗೆ
ವಿದಾಯ ಸೂಚಿಸುತ್ತಿದೆ
ಅಂತರಂಗದ ಭಾವ.

ಭೂತಾಯಿ ಸೆರಗೊಡ್ಡಿ ಕೂಗಿ ಕರೆಯುತಿಹಳು
"ಬಾ, ಮಗನೇ ತುಂಬಾ ನೊಂದಿರುವೆ
ಹಾಯಾಗಿ ನಿದ್ದೆ ಮಾಡು" ಎಂದು.
ಕ್ಷಣದಲ್ಲಿ ಜಿಗಿವೆ ಆ ತಾಯ ಮಡಿಲಿಗೆ
ನೀರಮೇಲಣ ಗುಳ್ಳೆಯೊಡೆದಂತೆ.
ಆಗ ?............
ಓ, ನನ್ನ ಮುದ್ದು ಕವಿತೆಗಳೆ
ನೀವು ಎಲ್ಲಿರುವಿರಿ ?
ಯಾರ ಆಸರೆ ಪಡೆಯುವಿರಿ
ಯಾರ ಎದೆಯಲ್ಲಿ ಬೆಚ್ಚಗೆ ಮಲಗುವಿರಿ

ಅಥವಾ............
ನನ್ನಂತೆ ತಬ್ಬಲಿಯಾಗಿ
ಜೀವ ಸವೆಸುವಿರಾ ?



ಮೌನಗೀತೆಯ ಕವಿ ಟಿ. ವಿ. ಷಡಕ್ಷರಿ. ಹುಟ್ಟಿದ್ದು ದಿನಾಂಕ 26-2-59ರಲ್ಲಿ, ತಡಸೂರಿನ ದಿ|| ಶಾರದಮ್ಮ ಮತ್ತು ದಿ|| ಮರುಳಯ್ಯ ತಾಯಿ ತಂದೆಯರು. ವ್ಯಾಸಂಗ ಪ್ರೌಢಶಾಲೆಯವರೆಗೆ. ಅನಾಥನಾದ ಈತನ ಸಧ್ಯದ ವಾಸ ಶೇಖರ್ ನರ್ಸಿಂಗ್ ಹೋಂ, ಬೆಂಗಳೂರು. ಇದಕ್ಕೆ ಕಾರಣ ರೊಮೆಟೈಟ್ ಜಾಯಿಂಟ್ಸ್ ಕಾಯಿಲೆ. ಮಾನವನ ಸಹಜವಾದ ಯಾವ ಬಯಕೆಗಳೂ ಈತನಿಗೆ ಇಲ್ಲ. ಐಹಿಕ ಸುಖ ಅನುಭವಿಸುವ ದೈಹಿಕ ಸ್ಥಿತಿಯೂ ಇಲ್ಲ. ಅಗತ್ಯವಾಗಿರುವುದು ಪ್ರೀತಿ ಮತ್ತು ಅನುಕಂಪ. ನೋವಿನ ನಡುವೆ ಈತನ ಹವ್ಯಾಸ ಓದುವುದು ಮತ್ತು ಬರೆಯುವುದು. ಎಲ್ಲರ ಗಮನವನ್ನು ಈತನಕಡೆ ಸೆಳೆದು, ಅವರಿಂದ ಶ್ರೀಯುತ ಷಡಾಕ್ಷರಿಗೆ ಹೆಚ್ಚಿನ ಪ್ರೀತಿ. ಸ್ನೇಹಗಳನ್ನು ಮತ್ತು ವೈದ್ಯಕೀಯ ನೆರವನ್ನು ದೊರಕಿಸಿಕೊಡಲು ತಗಲುವ ವೆಚ್ಚವನ್ನು ಸರಿದೂಗಿಸುವ ಉದ್ದೇಶದಿಂದ ಈತನ ಕವನಸಂಕಲನ "ಮೌನಗೀತೆ" ಪ್ರಕಟಗೊಂಡಿದೆ.




ಅಧ್ಯಕ್ಷರು ಮತ್ತು ಸದಸ್ಯರು
ಲಯನ್ಸ್ ಕ್ಲಬ್, ತಿಪಟೂರು.

ಅಕ್ಷಯ ಮುದ್ರಣ, ಬೆಂ-4